CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೦೩ (ಪುಷ್ಯ ೪, ಶಕ ವರ್ಷ ೧೯೨೫) | ಸಂಚಿಕೆ ೫೧ |
|---|---|---|


## ಭಾಗ - ೪ -ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

### ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಸಿಎಂಡಬ್ಲ್ಯೂ 112 ಸಿಎಸ್‌ಎಸ್ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2003**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಟ್ಟದಪುರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ, ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಕುಂಜಪ್ಪ ಕಾರ್ನಾಡ್ ಬಿನ್ ಲೇಟ್ ತಿಮ್ಮಪ್ಪಯ್ಯ, ಬೆಟ್ಟದಪುರ.
2) ಶ್ರೀಮತಿ ಬಿ.ವಿ. ಅನಿತಾ ಕೋಂ ತೋಟಪ್ಪ ಶೆಟ್ಟಿ, ಬೆಟ್ಟದಪುರ,
3) ಶ್ರೀ ಮಹದೇವ ಬಿನ್ ಹವಳಯ್ಯ ಅಲ್ಲನಾಯಕನಹಳ್ಳಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1238

**ಆರ್.ಎಸ್. ಹುಬ್ಬಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಾಕೈ 91 ಜಕೈಇ 2003, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2003**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ ಕಲಂ 2ರ ಮೇರೆಗೆ ಕೈಮಗ್ಗ ಮತ್ತು ಜವಳಿ ಇಲಾಖೆ (ನೃಪತುಂಗ ರಸ್ತೆ, ಬೆಂಗಳೂರು) ಇವರಿಗೆ ಪ್ರಾಧಿಕಾರಗಳನ್ನು ಈ ಕೆಳಗಿನಂತೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ.

| | ಸಾರ್ವಜನಿಕ ಪ್ರಾಧಿಕಾರ | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|---|
| 1. | ಜವಳಿ ಅಭಿವೃದ್ಧಿ ಆಯುಕ್ತರ ಕಛೇರಿ, ನಂ:14/3ಎ, ನೃಪತುಂಗ ರಸ್ತೆ, ಬೆಂಗಳೂರು-01. | ಜವಳಿ ಅಭಿವೃದ್ಧಿ ಆಯುಕ್ತರ ಪತ್ರಾಂಕಿತ ಸಹಾಯಕರು. | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು. |

| ಸಾರ್ವಜನಿಕ ಪ್ರಾಧಿಕಾರ | | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|---|
| 2. | ಉಪ/ಸಹಾಯಕ ನಿರ್ದೇಶಕರುಗಳ ಕಛೇರಿ ಜಿಲ್ಲೆ. | ಉಪ/ಸಹಾಯಕ ನಿರ್ದೇಶಕರು, ಸಂಬಂಧಪಟ್ಟ ಜಿಲ್ಲೆ. | ಆಯಾ ಜಿಲ್ಲೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಸಂಬಂಧಪಟ್ಟ ಜಿಲ್ಲೆ. |
| 3. | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಕಛೇರಿ, ಹುಬ್ಬಳ್ಳಿ. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಹುಬ್ಬಳ್ಳಿ. | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು. |
| 4. | ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮದ ಕಛೇರಿ, ಒಕ್ಕಲಿಗರ ಭವನ, ಕಿತ್ತೂರು ರಾಣಿ ಚೆನ್ನಮ್ಮ ವೃತ್ತ, ಬೆಂಗಳೂರು. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು. | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು. |
| 5. | ಕರ್ನಾಟಕ ರಾಜ್ಯ ಜವಳಿ ನಿಯಮಿತ, ಕಾರವಾರ ರಸ್ತೆ, ಹುಬ್ಬಳ್ಳಿ. | (1) ಆಡಳಿತಾಧಿಕಾರಿ, ಮಹದೇವ ಜವಳಿ ಗಿರಣಿ, ಹುಬ್ಬಳ್ಳಿ. (2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಜವಳಿ ನಿಯಮಿತ. | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1236

**ಬಿ.ಎಸ್. ಈಶ್ವರಪ್ರಸಾದ್**

ಪೀಠಾಧಿಕಾರಿ (ಜವಳಿ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## DEPARTMENT OF PERSONNEL AND ADMINISTRATIVE REFORMS SECRETARIAT

## NOTIFICATION

**No. DPAR 59 SLU 2003, Bangalore, Dated: 29th November 2003**

In exercise of the powers conferred by sub-section (1) of section 3 of the Prevention of Corruption Act, 1988 (Central Act 49 of 1988) read with section 21 of the General Clauses Act, 1897 (Central Act X of 1897), the Government of Karnataka hereby amends notification No.DPAR 106 SLU 2002, dated 4th February 2003, as follows:

In the said notification, in the table:-

(i) in the entries relating to serial number 17 in column 3, for the words "Mysore District," the words "Mysore District and Chamarajanagar District" shall be deemed always to have been substituted.

(ii) serial number 22 and the entries relating thereto shall be deemed always to have been omitted.

By Order and in the name of the Governor of Karnataka,

P.R. 1240

**H.R. NAGENDRA**

Under Secretary to Government-2,
Department of Personnel and Administrative Reforms, (Service Rules)

## ಸಹಕಾರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ:ಸಿಎಂಡಬ್ಲ್ಯೂ 285 ಸಸಕಾ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಭಾಗ್ಯಲಕ್ಷ್ಮೀ ಸಹಕಾರಿ ಸಕ್ಕರೆ ಕಾರ್ಖಾನೆ(ನಿ), ಖಾನಾಪುರ, ಬೆಳಗಾವಿ ಜಿಲ್ಲೆ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 27(1)ರಿಂದ ವಿನಾಯಿತಿ ನೀಡಿ ಸದರಿ ಕಾರ್ಖಾನೆಯ 2002-03ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 31-3-2004 ರವರೆಗೆ ಮುಂದೂಡಲಾಗಿದೆ.

ಈ ಸಕ್ಕರೆ ಕಾರ್ಖಾನೆಯ ವಾರ್ಷಿಕ ಮಹಾಸಭೆಗೆ ಸಂಬಂಧಿಸಿದಂತೆ ನ್ಯಾಯಾಲಯದ ಯಾವುದೇ ಆದೇಶವಿದ್ದತ್ತಲ್ಲಿ ಈಗ ನೀಡಲಾಗುತ್ತಿರುವ ಅವಧಿ ವಿಸ್ತರಣಾ ಆದೇಶವು ಊರ್ಜಿತವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1241

**ಅಹ್ಮದ್.ಎ.ಮುಖ್ತದರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಅಧಿಸೂಚನೆ

**ಸಂಖ್ಯೆ:ಸಿಎಂಡಬ್ಲ್ಯೂ 630 ಸಿಎನ್‌ಎಸ್ 2000, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 630 ಸಿಎನ್‌ಎಸ್ 2000, ದಿನಾಂಕ: 13.12.2000 ರಲ್ಲಿ ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಶೃಂಗೇರಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಚಂದ್ರಶೇಖರ ಹಂದಿಗೋಡು ತ್ಯಾವಣ ಅಂಚೆ, ಶೃಂಗೇರಿ ತಾ: ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಇವರ ಸ್ಥಾನದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ನಾಗಪ್ಪ ಗೌಡ ಬಿನ್ ಶ್ರೀ ಸಿಂಗಪ್ಪಗೌಡ, ಹಗಡೂರು ಧರೆಕೊಪ್ಪ ಅಂಚೆ ಇವರನ್ನು ಶೃಂಗೇರಿ ತಾಲ್ಲೂಕಿನ ವ್ಯವಸಾಯ ಸೇವಾ ಸಹಕಾರ ಸಂಘ ನಿ ಶೃಂಗೇರಿ, ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1242

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## FOOD, CIVIL SUPPLIES AND CONSUMER AFFAIRS SECRETARIAT

## NOTIFICATION

**No. FCS 32 FPP 2003, Bangalore, Dated: 29th November 2003**

In exercise of the powers conferred by sub clause (a) of clause 2 of the Lubricating Oils and Greases (Processing, Supply and Distribution Regulation) Order, 1987, the Government of Karnataka hereby authorise the officers specified in column (2) of the table below to exercise the powers and to perform the functions of the competent authority under the said order for the area specified in the corresponding entries in column (3) thereof.

**Table**

| Sl. No. | Officer | Jurisdiction |
|---|---|---|
| 1 | The Deputy Commissioner of the concerned district | Area comprised within the limits of the respective revenue district. (for wholesalers only) |
| 2 | The Tahsildar of the Revenue Taluk | Area comprised within the limits of the respective Revenue Taluk (for retailers only) |

**Explanation:-**

**Wholesalers means:-** Those who manufacture, blend, pack or refine any lubricating oil and grease and sell to the sellers, except the Oil Companies specified in Schedule 1 of the Lubricating Oils and Greases (Processing, Supply and Distribution Regulation) Order, 1987.

**Retailers:-** Those who sell the packed or non-packed lubricating oils and greases to the consumers.

By Order and in the name of the Governor of Karnataka,

P.R. 1243

**H.S. UDAYASHANKARA**

Under Secretary to Government,

Food, Civil Supplies and Consumer Affairs Department.

## NOTIFICATION

**No. FCS 17 EBT 2003, Bangalore, Dated: 7th August 2003**

The draft of the following rules further to amend The Karnataka Standards of Weights and Measures (Enforcement) Rules, 1988 which the Government of Karnataka proposes to make in exercise of the powers conferred by section 72 of The Standards of Weights and Measures (Enforcement) Act 1985 (Central Act 54 of 1985), and after consultation with the Government of India, is hereby published as required by sub-section (4) of the said Section for the information of all persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above, will be considered by the State Government. Objections and suggestions may be addressed to the Principal Secretary to Government, Food Civil Supplies and Consumer Affairs Department, 7th Floor, M.S.Building, Bangalore - 560 001.

## DRAFT RULES

**1. Short title and commenement.-** (1) These rules may be called The Karnataka Standards of Weights and Measures (Enforcement) (Amendment) Rules, 2003.

(2) They shall come into force from the date of their publication in the Official Gazette.

**2. Amendment of Rule 14.-** In the Karnataka Standards of Weights and Measures (Enforcement) Rules, 1998, in Rule 14, in Sub-rule (1) after the proviso, the following shall be inserted, namely:-

"Provided further that the Length Measures (Non-flexible) specified under Part IV of VI Schedule of The Standards of Weights and Measures (General) Rules. 1987 shall be reverified once in twenty four months".

By Order and in the name of the Governor of Karnataka,

P.R. 1244

**J. SRINIVASAN**

Under Secretary to Government,

Food, Civil Supplies and Consumer Affairs Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಗ್ರಾಅಪ.26.ಕಭೂನಿ.95, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2003**

ಕರ್ನಾಟಕ ಭೂಸೇನಾ ನಿಗಮ ನಿಯಮಿತದ ಅಂತರ್ನಿಯಮಾವಳಿಯ ಅನುಚ್ಛೇದ ಸಂ.75 (1)ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರದ ಅನ್ವಯ, ಕರ್ನಾಟಕ ಭೂಸೇನಾ ನಿಗಮ ನಿಯಮಿತದ ನಿರ್ದೇಶಕರುಗಳ ಮಂಡಳಿಗೆ ಈ ಕೆಳಗೆ ನಮೂದಿಸಿರುವಂತೆ ಮಾರ್ಪಾಡು ಮುಖೇನ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಹಾಲಿ ನಿರ್ದೇಶಕರ ಹೆಸರು | ಹಾಲಿ ನಿರ್ದೇಶಕರ ಬದಲಿಗೆ ಹೊಸದಾಗಿ ನಾಮ ನಿರ್ದೇಶನ ಮಾಡಲ್ಪಟ್ಟ ನಿರ್ದೇಶಕರ ಹೆಸರು |
|---|---|---|
| 1. | ಶ್ರೀ ಕೌಶಿಕ್ ಮುಖರ್ಜಿ ಭಾ.ಆ.ಸೇ ಮಾಜಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು. | ಶ್ರೀ ವೀ.ಪ. ಬಳಿಗಾರ ಭಾ.ಆ.ಸೇ ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು. |

ಈ ಆದೇಶವು ತಕ್ಷಣದಿಂದ ಹಾಗೂ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1245

**ಜಿ.ಬಿ. ಹಿರೇಮಣಿಯವರ್**

ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಕಾನೂನು ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 63 ಎಲ್ಎಜಿ 2003, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2003**

ಶ್ರೀ ಎಸ್. ಬಿಕಂಚಂದ್, ಅಪರ ಸರ್ಕಾರಿ ವಕೀಲರು, ನಂಜನಗೂಡು, ಇವರು ತಮ್ಮ ಹುದ್ದೆಗೆ ರಾಜಿನಾಮೆ ಸಲ್ಲಿಸಿದ್ದು, ಸದರಿ ರಾಜಿನಾಮೆಯನ್ನು ಈ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1246

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ಅಧಿಸೂಚನೆ**

**ಸಂಖ್ಯೆ: ಲಾ 55 ಎಲ್ಎಜಿ 2003, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2003**

ಶ್ರೀ ಸೂಗರಪ್ಪ ಎನ್.ಆಸಪಲ್ಲಿ, ಅಪರ ಸರ್ಕಾರಿ ವಕೀಲರು, ಗುಲ್ಬರ್ಗ, ಇವರನ್ನು ಹೊಸದಾಗಿ ಸ್ಥಾಪನೆಗೊಂಡ ಆಳಂದ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಕ್ಕೆ ಅಪರ ಸರ್ಕಾರಿ ವಕೀಲರನ್ನು ನೇಮಕ ಮಾಡುವವರೆಗೆ ಅಥವಾ ಈ ವಿಷಯದಲ್ಲಿ ಮುಂದಿನ ಆದೇಶ ಹೊರಡಿಸುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸದರಿ ನ್ಯಾಯಾಲಯದ ಪ್ರಕರಣಗಳಲ್ಲಿ ಸರ್ಕಾರದ ಪರ ವಕೀಲರು ಕೆ.ಎಲ್.ಓ. ನಿಯಮಗಳು 1977ರ ಷರತ್ತುಗಳಿಗೊಳಪಟ್ಟು, ಈ ತಕ್ಷಣದಿಂದ ಜಾರಿಗೆ ಬರುವಂತೆ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1247

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ಅಧಿಸೂಚನೆ**

**ಸಂಖ್ಯೆ: ಲಾ 106 ಎಲ್ಎಜಿ 2001, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಶ್ರೀ ಎನ್.ಜಿ. ಕೊಟ್ರೆ, ವಕೀಲರು ಹಾಗೂ ಜಿಲ್ಲಾ ಸರ್ಕಾರಿ ವಕೀಲರು, ಬೆಂಗಳೂರು ಇವರನ್ನು ಶ್ರೀ ಕೆ.ಎ. ಲಕ್ಷ್ಮೀನಾರಾಯಣ, 2ನೇ ಅಪರ ಸರ್ಕಾರಿ ವಕೀಲರು, ಬೆಂಗಳೂರು ಇವರ ರಾಜಿನಾಮೆಯಿಂದ ತೆರವಾದ ಜಾಗದಲ್ಲಿ ಪ್ರಕರಣ ವಹಿಸಲು ಮತ್ತು ಹಾಜರಾಗಲು

ಹಾಗೂ ಈ ಹುದ್ದೆಯನ್ನು ಹೊಸ ಅಭ್ಯರ್ಥಿಯಿಂದ ತುಂಬುವವರೆಗೆ, ಹೆಚ್ಚಿನ ಪ್ರಭಾರದಲ್ಲಿ ಕಾರ್ಯನಿರ್ವಹಿಸಲು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದ ವರೆಗೆ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1248 **ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**ಅಧಿಸೂಚನೆ**

**ಸಂಖ್ಯೆ: ಲಾ 106 ಎಲ್ಎಜಿ 2001, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2003**

ಶ್ರೀ ಕೆ.ಎ. ಲಕ್ಷ್ಮೀನಾರಾಯಣ, 2ನೇ ಅಪರ ಸರ್ಕಾರಿ ವಕೀಲರು, ಬೆಂಗಳೂರು, ಇವರು ದಿನಾಂಕ:23-7-03ರಂದು ಸಲ್ಲಿಸಿರುವ ರಾಜಿನಾಮೆಯನ್ನು ದಿನಾಂಕ:5-9-2003ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ ಹಾಗೂ ಅವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಿಮುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1249 **ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

**LAW SECRETARIAT**

**NOTIFICATION**

**No. LAW 135 LAC 2003, Bangalore, Dated: 30th July 2003**

Whereas the draft of the following rules further to amend the Karnataka Civil Rules of Practice, 1967 was published as required by section 122 of the Code of Civil Procedure, 1908 (Central Act V of 1908) in Notification No.LCA:1:536:92:HCLC, dated:6th Mach, 2003 in part IVA of the Karnataka Gazette dated:10th April, 2003, inviting objections or suggestions from all the persons likely to be affected thereby within fifteen days from the date of publication of the said draft in the official Gazette.

And whereas the said Gazette was made available to the public on tenth April, 2003.

And whereas no objections or suggestions have been received by the High Court of Karnataka.

Now therefore, in exercise of the Powers conferred by section 122 of the Code of Civil Procedure, 1908 (Central Act V of 1908) and with the prior approval of the Government of Karnataka, the High Court of Karnataka hereby makes the following rules, namely:-

**RULES**

**1. Title and Commencement.-** (1) These rules may be called the Karnataka Civil Rules of Practice (Amendment) Rules, 2003.

(2) They shall come into force on the date of their publication in the Official Gazette.

**2. Amendment of Rule 100.-** In rule 100 of the Karnataka Civil Rules of Practice, 1967 (hereinafter referred to as the said rules)

(1) In clause (a).-

(i) the words letters and figures "subject to a maximum of Rs.15,000/-" appearing in column No.2 relating to advocates fees, against the entry, "above Rs.1,00,000/-" shall be omitted.

(ii) for the figures and letters "Rs.250-" in the proviso, the figures and letters Rs. "500/-" shall be substituted.

(2) in clause (b), in the provioso, for the figures and letters "Rs.350/-" the figures and letters "Rs.500/-" shall be substituted.

(3) in clause (1), for the table, the following table shall be substituted, namely:-

| Sl. No. | Nature of Proceeding | Minimum | Maximum |
|---|---|---|---|
| | | Rs. | Rs. |
| (i) | Land Acquisition cases and Motor Accidents Claims Cases<br>Note: If a group of cases is heard together, the minimum shall be Rs.1,000/- and maximum Rs.20,000/- for all of them together and the court may apportion the fee for each case separately. | 500 | 10,000 |
| (ii) | Matrimonial case | 500 | 2,000 |
| (iii) | Guardians and Wards Case | 500 | 2,000 |
| (iv) | Probate and Succession Case: | | |
| | (a) If uncontested | 250 | 1,500 |
| | (b) If contested | 500 | 4,000 |

| Sl. No. | Nature of Proceeding | Minimum | Maximum |
|---|---|---|---|
| | | Rs. | Rs. |
| (v) | Insolvency case: | | |
| | (a) Contested Adjudication | 500 | 2,000 |
| | (b) Determination of title and Priority | 500 | 2,000 |
| | (c) Dispute relating to alienation | 500 | 2,000 |
| (vi) | Arbitration cases | 500 | 2,000 |
| (vii) | Cases under the Karnataka Rent Control Act | 500 | 2,000 |
| (viii) | Any other original proceeding | 500 | 2,000 |
| (ix) | Injunction Suits before Civil Judge (Junior Division) | 500 | 3,000 |
| (x) | Injunction Suits before Civil Judge (Senior Division) | 750 | 5,000 |
| (xi) | Interlocutory matter | 250 | 500 |
| (xii) | Miscellaneous Appeal or House Rent Control Appeal or Revision or Revision Petition under any other enactment. | 500 | 2,000 |

(4) for clause (n), the following clause shall be substituted, namely:-

"(n) Notwithstanding anything contained in Schedule-III to the Bombay Pleaders Act (Bombay Act 17 of 1920), the fees contained in clauses (a) to (m) shall be pleaders fee to be included in the costs awarded by court to a party in a suit or other proceeding".

By Order and in the name of the Governor of Karnataka,

P.R. 1250

**CHIKKAHANUMANTHAIAH**

Under Secretary to Government,
Law Department (Admn-I)

**ಕಾನೂನು ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 131 ಎಲ್‌ಸಿಎಲ್ 2002, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ಪ್ರಾವಿನ್ಶಿಯಲ್ ಇನ್‌ಸಾಲ್ವೆನ್ಸಿ ಅಧಿನಿಯಮ 1920 (ಕೇಂದ್ರ ಅಧಿನಿಯಮ 1920ರ 5) ನಿಯಮ 57ರ ಉಪನಿಯಮ (1)ರಲ್ಲಿ ಪ್ರದತ್ತವಾಗಿರುವ ಮತ್ತು ಪ್ರಾವಿನ್ಶಿಯಲ್ ಇನ್‌ಸಾಲ್ವೆನ್ಸಿ (ಕರ್ನಾಟಕ ಎಕ್ಸ್‌ಟೆನ್‌ಷನ್ ಅಂಡ್ ಅಮೆಂಡ್‌ಮೆಂಟ್) ಅಧಿನಿಯಮ 1952ರನ್ವಯ ಪ್ರದತ್ತವಾದ ಅಧಿಕಾರವನ್ನು ಬಳಸಿಕೊಂಡು ಕರ್ನಾಟಕ ಸರ್ಕಾರವು ಶ್ರೀ ಯು. ಬಸವರಾಜು, ವಕೀಲರು, ಬಳ್ಳಾರಿ ಇವರನ್ನು ಬಳ್ಳಾರಿ ಜಿಲ್ಲೆಗೆ ದಿನಾಂಕ 26-01-1999ರಿಂದ 31-12-2003ರವರೆಗೆ ಅಫಿಷಿಯಲ್ ರಿಸೀವರ್‌ನ್ನಾಗಿ ಮುಂದುವರೆಸಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1251

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 118 ಗುಅಪ್ರಾ 2003, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2003**

ಅಧಿಸೂಚನೆ ಸಂಖ್ಯೆ: ನಅಇ 191 ಗುಅಪ್ರಾ 2000 ದಿನಾಂಕ:27-11-2000 ಮತ್ತು 6-12-2000 ರಲ್ಲಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಶ್ರೀ ಎ. ವಸಂತಕುಮಾರ್ ಮತ್ತು ಇತರೆ ಸದಸ್ಯರುಗಳನ್ನು ನೇಮಕ ಮಾಡಲಾಗಿತ್ತು. ದಿನಾಂಕ: 5-12-2003ಕ್ಕೆ ಅಧ್ಯಕ್ಷರ ಅಧಿಕಾರ ಅವಧಿ ಮುಕ್ತಾಯಗೊಳ್ಳುವುದರಿಂದ ಇವರ ಸ್ಥಾನದಲ್ಲಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಜಿಲ್ಲಾಧಿಕಾರಿಗಳು, ರಾಯಚೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1253

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**URBAN DEVELOPMENT SECRETARIAT**
**NOTIFICATION**
**No. UDD 140 Bemrupra 2003, Bangalore, Dated: 28th November 2003**

The draft of the following rules, further to amend the Karnataka State Town Planning Board Rules, 1964, which the Government of Karnataka proposes to make in exercise of the powers conferred by sub-section (1) of section 74 of the Karnataka Town and Country Planning Act, 1961 (Karnataka Act 11 of 1963) is hereby published as required under the said section for the information of all persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion, which may be received by the State Government from any person, with respect to the said draft before the expiry of the period specified above, will be considered by the State Government Objections or suggestions may be addressed to the Secretary to Government, Urban Development Department, M.S. Building, Bangalore - 560 001.

**DRAFT RULES**

**1. Title and commencement.-** (1) These rules may be called the Karnataka State Town Planning Board (Amendment) Rules, 2003. (2) They shall come into force at once.

**2. Amendment of rules 3.-** In rule 3 of the Karnataka State Town Planning Board Rules, 1964, in sub-rule (i) after clause (h) the following shall be inserted namely:

"(hh) Chief Architect, Government of Karnataka"

By Order and in the name of the Governor of Karnataka,

P.R. 1254

**V. SRIDHARAMURTHY**
Under Secretary to Government,
Urban Development Department.

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 141 ಬೆಮಪ್ರಾ 2000, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 5ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ವಿಜಾಪುರ ಜಿಲ್ಲೆ ಮುದ್ದೇಬಿಹಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗಗಳನ್ನು ಗುರ್ತಿಸಲು ದಿನಾಂಕ: 15-10-2001 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 141 ಬೆಮಪ್ರಾ 2000, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003**

**ವಿಷಯ:** ಮುದ್ದೇಬಿಹಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸ್ಥೂಲಾಭಿವೃದ್ಧಿ ಯೋಜನೆಯನ್ನು ತಯಾರಿಸುವ ಬಗ್ಗೆ.

ಸಾರ್ವಜನಿಕರ ಗಮನಕ್ಕೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 10 ರಡಿಯಲ್ಲಿ ವಿಜಾಪುರ ಜಿಲ್ಲೆ ಮುದ್ದೇಬಿಹಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸ್ಥೂಲಾಭಿವೃದ್ಧಿ ಯೋಜನೆಯನ್ನು ತಯಾರಿಸಲು ಉದ್ದೇಶಿಸಲಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸಲಹೆ ಸೂಚನೆ ಆಕ್ಷೇಪಣೆಗಳನ್ನು ಖುದ್ದಾಗಿಯಾಗಲೀ ಅಥವಾ ನೊಂದಾಯಿತ ಅಂಚೆಯ ಮೂಲಕವಾಗಲೀ ಪ್ರಾಧಿಕಾರದ ಕಛೇರಿಯಲ್ಲಿ ಅರವತ್ತು ದಿನಗಳ ಒಳಗಾಗಿ ಸ್ವೀಕರಿಸಲಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1255

**ವಿ. ಶ್ರೀಧರಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 431 ಮೈಅಪ್ರಾ 2003, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2003**

ಅಧಿಸೂಚನೆ ಸಂಖ್ಯೆ: ನಅಇ 191 ಮೈಅಪ್ರಾ 2000 ದಿನಾಂಕ:1-12-2000 ಮತ್ತು ಸಂಖ್ಯೆ:ನಅಇ 81 ಮೈಅಪ್ರಾ 2001 ದಿನಾಂಕ:6-12-01ರಲ್ಲಿ ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಶ್ರೀ ಗೋಪಾಲಕೃಷ್ಣ ಶೆಟ್ಟಿ ಇವರನ್ನು ಹಾಗೂ ಇತರೆ ಸದಸ್ಯರುಗಳನ್ನು ನೇಮಕ ಮಾಡಲಾಗಿತ್ತು. ದಿ:4-12-2003ಕ್ಕೆ ಅಧ್ಯಕ್ಷರ ಅಧಿಕಾರ ಅವಧಿ ಮುಕ್ತಾಯಗೊಳ್ಳುವುದರಿಂದ, ಇವರ ಸ್ಥಾನದಲ್ಲಿ ಉಡುಪಿ ಜಿಲ್ಲಾಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1256

**ವಿ. ಶ್ರೀಧರಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನ.ಅ.ಇ 36 ಎಂ.ಎಲ್.ಆರ್. 2002 (B-41), ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2003**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೊಳ್ಳೇಗಾಲ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ. ನ.ಅ.ಇ. 36 ಎಂ.ಎಲ್.ಆರ್. 2002 (B-41) ದಿನಾಂಕ 29.06.2002 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಕ್ರಮ ಸಂಖ್ಯೆ.5. ಶ್ರೀ ಜಿ. ಮುಕದಾರ್ ಬಿನ್ ದಿ: ಗೋಸಾಪೀರ್. ನಂ.1-339, ಜಿ.ಪಿ.ಎಂ.ಪುರಂ, ಕೊಳ್ಳೇಗಾಲ ಇವರ ಸದಸ್ಯತ್ವವನ್ನು ರದ್ದು ಪಡಿಸಿ ಅವರ ಬದಲಿಗೆ ಶ್ರೀ ಅಕಮಲ್ ಪಾಷ ಬಿನ್ ಸುಬಾನ್ ಷರೀಫ್, ಕೊಳ್ಳೇಗಾಲ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1257

**ಜಗದೀಶ್ ಜೋಯಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ನ.ಅ.ಇ 36 ಎಂ.ಎಲ್.ಆರ್. 2002 (B-54), ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2003

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಕಲೇಶಪುರ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ. ನ.ಅ.ಇ. 36 ಎಂ.ಎಲ್.ಆರ್. 2002 (B-54) ದಿನಾಂಕ 20.06.2003 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಕ್ರಮ ಸಂಖ್ಯೆ.1. ಶ್ರೀ ಫಾಜಿಲ್, ಮಿಲನ್ ಟ್ರೇಡರ್ಸ್, ಬಿ.ಎಂ.ರಸ್ತೆ, ಸಕಲೇಶಪುರ ಮತ್ತು ಕ್ರಮ ಸಂಖ್ಯೆ. 5 ಶ್ರೀಮತಿ ಲೂಸಿ ಪರೇರಾ ಬಿನ್ ಗ್ರೆಗೋರ್ ಪಿಂಟೊ, ಬಿ.ಎಂ. ರಸ್ತೆ, ಸಕಲೇಶಪುರ ಇವರುಗಳ ಸದಸ್ಯತ್ವವನ್ನು ರದ್ದು ಪಡಿಸಿ ಅವರ ಬದಲಿಗೆ ಶ್ರೀಮತಿ ಶ್ಯಾಮಲ ಕೋಂ ನಾಗೇಂದ್ರ, ಲಕ್ಷ್ಮೀಪುರ ಬಡಾವಣೆ, ಸಕಲೇಶಪುರ ಮತ್ತು ಶ್ರೀ ಮೈಕ್ ರಫೀಕ್, ಸಕಲೇಶಪುರ ಇವರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1258

**ಜಗದೀಶ್ ಜೋಯಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ನ.ಅ.ಇ 36 ಎಂ.ಎಲ್.ಆರ್. 2002 (C-79), ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2003

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೊಳಕಾಲ್ಮೂರು ಪಟ್ಟಣ ಪಂಚಾಯಿತಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

1. ಶ್ರೀ ಕೆ. ಶಿವಾನಂದ ಬಿನ್ ಶ್ರೀ ಕೆ.ಕೃಷ್ಣಪ್ಪ, ಎಸ್.ಬಿ. ರಸ್ತೆ, ಮೊಳಕಾಲ್ಮೂರು.
2. ಶ್ರೀ ಎನ್. ಅಬೂಸ್ವಾಲೇಹ, ಬಿನ್ ಶ್ರೀ ಎನ್. ಖಾಜಾ ಹುಸೇನ್, ದರ್ಗಾ ಹತ್ತಿರ, ಮೊಳಕಾಲ್ಮೂರು.
3. ಶ್ರೀ ಪಿಗ್ಮಿ ಬಸಣ್ಣ ಬಿನ್ ಶ್ರೀ ನಾಗಪ್ಪ, ಮೊಳಕಾಲ್ಮೂರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1259

**ಜಗದೀಶ್ ಜೋಯಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕೃತೋಇ 70 ಕೃಇಮಂ 2003, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2003

ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ ಅಂತರ್ ನಿಯಮಾವಳಿ (ಆರ್ಟಿಕಲ್ ಆಫ್ ಅಸೋಸಿಯೇಷನ್) ಅನುಚ್ಛೇದ 122(ಬಿ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಡಾ. ಟಿ.ಕೆ. ಪ್ರಭಾಕರ ಶೆಟ್ಟಿ, ಸಂಶೋಧನಾ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರನ್ನು ಡಾ. ವೈ.ಹೆಚ್. ಯಡಹಳ್ಳಿ ಇವರ ಬದಲಿಗೆ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ ಸಂಸ್ಥೆಯ ನಿರ್ದೇಶಕರ ಮಂಡಳಿಯಲ್ಲಿ ನಿರ್ದೇಶಕರಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1260

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ಕೃತೋಇ 72 ಕೃಇಮಂ 2003, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2003

ಕರ್ನಾಟಕ ಸ್ಟೇಟ್ ಆಗ್ರೋಕಾರನ್ ಪ್ರಾಡಕ್ಟ್ ಲಿಮಿಟೆಡ್‌ನ ಅಂತರ ನಿಯಮಾವಳಿ (ಆರ್ಟಿಕಲ್ ಆಫ್ ಅಸೋಸಿಯೇಷನ್) ಅನುಚ್ಛೇದ 5 ಬಿ (II) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸೈಯದ್ ಉಮರ್ ಫರೋಕ್ ಸಹ ಕಾರ್ಯದರ್ಶಿ ಆರ್ಥಿಕ ಇಲಾಖೆ (ವೆಚ್ಚ) ಇವರನ್ನು ಶ್ರೀ ಗುರುಮೂರ್ತಿ ಹೆಗಡೆ ಉಪಕಾರ್ಯದರ್ಶಿ ಇವರ ವರ್ಗಾವಣೆಯಿಂದ ತೆರವಾದ ಜಾಗದಲ್ಲಿ ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಸ್ಟೇಟ್ ಆಗ್ರೋಕಾರನ್ ಪ್ರಾಡಕ್ಟ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1261

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಸಂಖ್ಯೆ: ಸಂವ್ಯಶಾಇ 29 ರಾಶಾಪ್ರ 2003, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2003**

**ಅಧಿಸೂಚನೆ**

ಕರ್ನಾಟಕ ಬಂದೀಖಾನೆಗಳ ಅಧಿನಿಯಮ, 1963 ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಆಫಿಷಿಯಲ್ ಲಾಂಗ್ವೇಜ್ ಆಕ್ಟ್ 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**1963ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 33**

**(1963ರ ನವೆಂಬರ್ ಏಳನೇ ದಿನಾಂಕದ [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟವಾಯಿತು)**

# [1][ಕರ್ನಾಟಕ][1] ಬಂದೀಖಾನೆಗಳ ಅಧಿನಿಯಮ, 1963

(1963ರ ನವೆಂಬರ್ 4ನೇ ದಿವಸದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಿತು)

(1965ರ ಅಧಿನಿಯಮ ಸಂಖ್ಯೆ 13ರ ಮೂಲಕ ತಿದ್ದುಪಡಿಯಾಗಿದೆ)

**[1][ಕರ್ನಾಟಕ ರಾಜ್ಯ][1]ದಲ್ಲಿ ಬಂದೀಖಾನೆಗಳನ್ನು ನಿಯಂತ್ರಿಸಲು ಏಕರೂಪದ ಕಾನೂನಿಗಾಗಿ ಉಪಬಂಧಿಸುವ ಅಧಿನಿಯಮ.**

[1][ಕರ್ನಾಟಕ ರಾಜ್ಯ][1]ದಲ್ಲಿ ಬಂದೀಖಾನೆಗಳನ್ನು ನಿಯಂತ್ರಿಸಲು ಏಕರೂಪದ ಕಾನೂನಿಗಾಗಿ ಉಪಬಂಧಿಸುವುದು ವಿಹಿತವಾಗಿರುವುದರಿಂದ:-

ಭಾರತ ಗಣರಾಜ್ಯದ ಹದಿನಾಲ್ಕನೆಯ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯದ ವಿಧಾನಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:-

## ಅಧ್ಯಾಯ - I

### ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು [1][ಕರ್ನಾಟಕ][1] ರಾಜ್ಯದ ಬಂದೀಖಾನೆಗಳ ಅಧಿನಿಯಮ, 1963 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1]ಕ್ಕೆ ವ್ಯಾಪ್ತವಾಗುತ್ತದೆ.

(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [2][ದಿನಾಂಕ][2]ದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಸಿವಿಲ್ ಬಂದಿ" ಎಂದರೆ, ಕ್ರಿಮಿನಲ್ ಬಂದಿಯಲ್ಲದೆ ಇರುವ ಯಾವನೇ ಬಂದಿ;

(ಬಿ) "ಅಪರಾಧಿಯೆಂದು ನಿರ್ಣೀತನಾದ ಕ್ರಿಮಿನಲ್ ಬಂದಿ" ಎಂದರೆ, ನ್ಯಾಯಾಲಯ ಅಥವಾ ಸೇನಾ ನ್ಯಾಯಾಲಯದ ಶಿಕ್ಷೆಗೆ ಒಳಪಟ್ಟಿರುವ ಯಾವನೇ ಕ್ರಿಮಿನಲ್ ಬಂದಿ; ಮತ್ತು ಅದು, ದಂಡ ಪ್ರಕ್ರಿಯಾ ಸಂಹಿತೆ, 1898 (1898ರ ಕೇಂದ್ರ ಅಧಿನಿಯಮ V) ರ VIII ನೇ ಅಧ್ಯಾಯದ ಉಪಬಂಧಗಳ ಮೇರೆಗೆ ಬಂದೀಖಾನೆಯಲ್ಲಿ ತಡೆಹಿಡಿದಿಟ್ಟ ವ್ಯಕ್ತಿಯನ್ನೂ ಒಳಗೊಳ್ಳುತ್ತದೆ;

(ಸಿ) "ಕ್ರಿಮಿನಲ್ ಬಂದಿ" ಎಂದರೆ, ಕ್ರಿಮಿನಲ್ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುವ ಯಾವುದೇ ನ್ಯಾಯಾಲಯ ಅಥವಾ ಪ್ರಾಧಿಕಾರದ ರಿಟ್ಟು, ವಾರೆಂಟು ಅಥವಾ ಆದೇಶ ಅಥವಾ ಸೇನಾ ನ್ಯಾಯಾಲಯದ ಆದೇಶದ ಮೇರೆಗೆ ಅಭಿರಕ್ಷೆಗೆ ಕ್ರಮಬದ್ಧವಾಗಿ ಒಪ್ಪಿಸಲಾದ ಯಾವನೇ ಬಂದಿ;

(ಡಿ) "ಫರ್ಲೋ ಪದ್ಧತಿ" ಎಂದರೆ, 63ನೇ ಪ್ರಕರಣದ ಮೇರೆಗೆ ರಚಿಸಿದ ನಿಯಮಗಳಿಗನುಸಾರವಾಗಿ ಫರ್ಲೋವಿನ ಮೇಲೆ ಜೈಲುಗಳಲ್ಲಿ ಬಂದಿಗಳನ್ನು ಬಿಡುಗಡೆ ಮಾಡುವ ಪದ್ಧತಿ;

(ಇ) "ಇತಿ ವೃತ್ತ" ಎಂದರೆ, ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಮೂಲಕ ಪ್ರತಿಯೊಬ್ಬ ಬಂದಿಗೆ ಸಂಬಂಧಿಸಿದಂತೆ ಅಗತ್ಯಪಡಿಸಿರುವಂಥ ಮಾಹಿತಿಯನ್ನು ತೋರಿಸುವ ಚೀಟಿ;

(ಎಫ್) "ಇನ್ಸ್‌ಪೆಕ್ಟರ್ ಜನರಲ್" ಎಂದರೆ, ಬಂದೀಖಾನೆಗಳ ಇನ್ಸ್‌ಪೆಕ್ಟರ್ ಜನರಲ್;

(ಜಿ) "ಅಧೀನ ವೈದ್ಯಕೀಯ ಅಧಿಕಾರಿ" ಎಂದರೆ, 4ನೇ ಪ್ರಕರಣದ ಮೇರೆಗೆ ಅಧೀನ ವೈದ್ಯಕೀಯ ಅಧಿಕಾರಿ ಎಂದು ನೇಮಕಗೊಂಡ ಸಹಾಯಕ ಶಸ್ತ್ರ ಚಿಕಿತ್ಸಕ;

(ಹೆಚ್) "ಅಧಿಸೂಚನೆ" ಎಂದರೆ, ರಾಜಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ;

(ಐ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಜೆ) "ಬಂದೀಖಾನೆ" ಎಂದರೆ, ಬಂದಿಗಳನ್ನು ತಡೆಹಿಡಿದಿಟ್ಟುಕೊಳ್ಳುವುದಕ್ಕಾಗಿ ರಾಜ್ಯ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶದ ಮೇರೆಗೆ ಖಾಯಂ ಆಗಿ ಅಥವಾ ತಾತ್ಕಾಲಿಕವಾಗಿ ಉಪಯೋಗಿಸುವ ಯಾವುದೇ ಜೈಲು ಅಥವಾ ಸ್ಥಳ ಮತ್ತು ಅದು ಅದಕ್ಕೆ ಲಗತ್ತಾದ ಎಲ್ಲಾ ಭೂಮಿಗಳು ಮತ್ತು ಕಟ್ಟಡಗಳನ್ನು ಒಳಗೊಳ್ಳುತ್ತದೆ; ಆದರೆ,-

(i) ಪೊಲೀಸರ ಅಭಿರಕ್ಷೆಯಲ್ಲಿ ಅನನ್ಯವಾಗಿ ಇರುವ ಬಂದಿಗಳ ಬಂಧನಕ್ಕಾಗಿನ ಯಾವುದೇ ಸ್ಥಳ;

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಅಧಿನಿಯಮವು ಅಧಿಸೂಚನೆಯ ಮೂಲಕ 25.7.1974 ರಿಂದ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು 18ನೇ ಪುಟದಲ್ಲಿದೆ.

(ii) ದಂಡ ಪ್ರಕ್ರಿಯಾ ಸಂಹಿತೆ, 1898 ರ 541ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ವಿಶೇಷವಾಗಿ ಗೊತ್ತುಪಡಿಸಿದ ಯಾವುದೇ ಸ್ಥಳ;

(iii) ಸಹಾಯಕ ಜೈಲು ಆಗಿರುವುದಾಗಿ ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಘೋಷಿಸಲಾಗಿರುವಂಥ ಯಾವುದೇ ಸ್ಥಳ

- ಇವುಗಳನ್ನು ಒಳಗೊಳ್ಳುವುದಿಲ್ಲ;

(ಕೆ) "ನಿಷೇಧಿತ ವಸ್ತು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮದ ಮೂಲಕ ಯಾವುದನ್ನು ಬಂದೀಖಾನೆಯೊಳಕ್ಕೆ ತರುವುದನ್ನು ಅಥವಾ ಅಲ್ಲಿಂದ ಸ್ಥಳಾಂತರಿಸುವುದನ್ನು ನಿಷೇಧಿಸಲಾಗಿದೆಯೋ ಆ ವಸ್ತು;

(ಎಲ್) "ಜೈಲಿನಲ್ಲಿ ಶಿಕ್ಷೆಯನ್ನು ಕಡಿಮೆ ಮಾಡುವ ಪದ್ಧತಿ" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ನಿಯಮಗಳಿಗನುಸಾರವಾಗಿ ಜೈಲಿನಲ್ಲಿರುವ ಬಂದಿಗಳಿಗೆ ಅಂಕಗಳನ್ನು ಕೊಡುವುದನ್ನು ನಿಯಂತ್ರಿಸುವ ಮತ್ತು ತತ್ಪರಿಣಾಮವಾಗಿ ಅವರ ಶಿಕ್ಷೆಗಳನ್ನು ಮೊಟಕುಗೊಳಿಸುವ ಪದ್ಧತಿ.

## ಅಧ್ಯಾಯ - II
## ಬಂದೀಖಾನೆಗಳ ನಿರ್ವಹಣೆ ಮತ್ತು ಅವುಗಳ ಅಧಿಕಾರಿಗಳು

3. **ಇನ್ಸ್‌ಪೆಕ್ಟರ್ ಜನರಲ್.-** ರಾಜ್ಯ ಸರ್ಕಾರವು ಇನ್ಸ್‌ಪೆಕ್ಟರ್ ಜನರಲ್ಲನನ್ನು ನೇಮಕ ಮಾಡತಕ್ಕದ್ದು, ಅವನು ರಾಜ್ಯ ಸರ್ಕಾರದ ಆದೇಶಗಳಿಗೊಳಪಟ್ಟು ರಾಜ್ಯದಲ್ಲಿನ ಎಲ್ಲಾ ಬಂದೀಖಾನೆಗಳ ಸಾಮಾನ್ಯ ನಿಯಂತ್ರಣ ಮತ್ತು ಅಧೀಕ್ಷಣೆಯನ್ನು ಚಲಾಯಿಸತಕ್ಕದ್ದು.

4. **ಬಂದೀಖಾನೆಗಳ ಅಧಿಕಾರಿಗಳು.-** ಪ್ರತಿಯೊಂದು ಬಂದೀಖಾನೆಗಾಗಿ ಒಬ್ಬ ಸೂಪರಿಂಟೆಂಡೆಂಟ್, ಒಬ್ಬ ವೈದ್ಯಾಧಿಕಾರಿ (ಅವನು ಸೂಪರಿಂಟೆಂಡೆಂಟನಾಗಿಯೂ ಸಹ ಇರಬಹುದು), ಒಬ್ಬ ಅಧೀನ ವೈದ್ಯಕೀಯ ಅಧಿಕಾರಿ, ಒಬ್ಬ ಜೈಲರ್ ಮತ್ತು ರಾಜ್ಯ ಸರ್ಕಾರವು ಅವಶ್ಯವೆಂದು ಯೋಚಿಸುವಂಥ ಇತರ ಅಧಿಕಾರಿಗಳು ಇರತಕ್ಕದ್ದು:

ಪರಂತು, ರಾಜ್ಯ ಸರ್ಕಾರವು, ಬರಹದಲ್ಲಿನ ಆದೇಶದ ಮೂಲಕ, ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಬಂದೀಖಾನೆಯಲ್ಲಿ ಸೂಪರಿಂಟೆಂಡೆಂಟನಾಗಿರಲು ನೇಮಕಗೊಂಡ ವ್ಯಕ್ತಿಯು ಜೈಲರ್‌ನ ಪದವನ್ನು ಧಾರಣ ಮಾಡತಕ್ಕದ್ದೆಂದು ಘೋಷಿಸಬಹುದು.

5. **ಬಂದಿಗಳಿಗಾಗಿ ಸ್ಥಳಾವಕಾಶ.-** ರಾಜ್ಯ ಸರ್ಕಾರವು, ರಾಜ್ಯದಲ್ಲಿನ ಬಂದಿಗಳಿಗಾಗಿ, ಬಂದಿಗಳನ್ನು ಪ್ರತ್ಯೇಕವಾಗಿಡುವುದಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಅಗತ್ಯತೆಗಳನ್ನು ಪಾಲಿಸುವಂಥ ರೀತಿಯಲ್ಲಿ ನಿರ್ಮಿಸಿದ ಮತ್ತು ನಿಯಂತ್ರಿಸಿದ ಬಂದೀಖಾನೆಯ ಸ್ಥಳಾವಕಾಶವನ್ನು ಒದಗಿಸತಕ್ಕದ್ದು.

6. **ತಾತ್ಕಾಲಿಕ ಸ್ಥಳಾವಕಾಶ.-** ಇನ್ಸ್‌ಪೆಕ್ಟರ್ ಜನರಲ್ಲನಿಗೆ, ಯಾವುದೇ ಬಂದೀಖಾನೆಯಲ್ಲಿ ಇರುವ ಬಂದಿಗಳ ಸಂಖ್ಯೆಯು ಅದರಲ್ಲಿ ಅನುಕೂಲಕರವಾಗಿ ಅಥವಾ ಸುರಕ್ಷಿತವಾಗಿ ಇಡಬಹುದಾದುದಕ್ಕಿಂತ ಹೆಚ್ಚಾಗಿದೆ ಎಂದು ಮತ್ತು ಹೆಚ್ಚಿನ ಸಂಖ್ಯೆಯವರನ್ನು ಯಾವುದೇ ಇತರ ಬಂದೀಖಾನೆಗೆ ವರ್ಗಾಯಿಸುವುದು ಅನುಕೂಲವಾಗಿಲ್ಲವೆಂದು ಕಂಡುಬಂದಾಗಲೆಲ್ಲಾ,

ಅಥವಾ, ಯಾವುದೇ ಬಂದೀಖಾನೆಯೊಳಗೆ ಸಾಂಕ್ರಾಮಿಕ ರೋಗವು ತಲೆದೋರುವುದರಿಂದ ಅಥವಾ ಯಾವುದೇ ಇತರ ಕಾರಣಕ್ಕಾಗಿ ಯಾರೇ ಬಂದಿಗಳ ತಾತ್ಕಾಲಿಕ ಮತ್ತು ಸುರಕ್ಷಿತ ಅಭಿರಕ್ಷೆಗಾಗಿ ವ್ಯವಸ್ಥೆ ಮಾಡುವುದು ಅಪೇಕ್ಷಣೀಯವಾಗಿರುವಾಗಲೆಲ್ಲಾ, ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಅಧಿಕಾರಿಯ ಮತ್ತು ಅಂಥ ರೀತಿಯಲ್ಲಿ ಆಶ್ರಯ ಮತ್ತು ಸುರಕ್ಷಿತ ಅಭಿರಕ್ಷೆಗಾಗಿ ಆ ಬಂದೀಖಾನೆಯಲ್ಲಿ ಅನುಕೂಲಕರವಾಗಿ ಅಥವಾ ಸುರಕ್ಷಿತವಾಗಿ ಇಟ್ಟುಕೊಳ್ಳಲಾಗದೆ ಇರುವಂಥ ಅಷ್ಟರ ಮಟ್ಟಿನ ಬಂದಿಗಳನ್ನು ತಾತ್ಕಾಲಿಕ ಬಂದೀಖಾನೆಗಳಲ್ಲಿ ವ್ಯವಸ್ಥೆಯನ್ನು ಮಾಡತಕ್ಕದ್ದು.

## ಅಧ್ಯಾಯ - III
## ಅಧಿಕಾರಿಗಳ ಕರ್ತವ್ಯಗಳು
### ಸಾಮಾನ್ಯ

7. **ಬಂದೀಖಾನೆಗಳ ಅಧಿಕಾರಿಗಳ ನಿಯಂತ್ರಣ ಮತ್ತು ಕರ್ತವ್ಯಗಳು.-** ಬಂದೀಖಾನೆಯ ಎಲ್ಲಾ ಅಧಿಕಾರಿಗಳು, ಸೂಪರಿಂಟೆಂಡೆಂಟನ ನಿರ್ದೇಶನಗಳನ್ನು ಪಾಲಿಸತಕ್ಕದ್ದು. ಜೈಲರನಿಗೆ ಅಧೀನರಾದ ಎಲ್ಲಾ ಅಧಿಕಾರಿಗಳು, ಸೂಪರಿಂಟೆಂಡೆಂಟನ ಮಂಜೂರಾತಿಯಿಂದ ಜೈಲರನು ನಿಯಮಿಸಬಹುದಾದಂಥ ಅಥವಾ ಅವನು ಅವರಿಗೆ ವಿಧಿಸಬಹುದಾದಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

8. **ಅಧಿಕಾರಿಗಳು ಬಂದಿಗಳೊಡನೆ ವ್ಯವಹಾರದ ವಹಿವಾಟನ್ನು ಹೊಂದಿರತಕ್ಕದ್ದಲ್ಲ.-** ಬಂದೀಖಾನೆಯ ಯಾವನೇ ಅಧಿಕಾರಿಯು, ಯಾವನೇ ಬಂದಿಗೆ ಯಾವುದೇ ವಸ್ತುವನ್ನು ಮಾರತಕ್ಕದ್ದಲ್ಲ ಅಥವಾ ಬಾಡಿಗೆಗೆ ಕೊಡತಕ್ಕದ್ದಲ್ಲ ಅಥವಾ ಅವನಿಗಾಗಿ ನ್ಯಾಸದಲ್ಲಿ ಇರುವ ಅಥವಾ ಅವನಿಂದ ನಿಯೋಜಿತನಾದ ಯಾವನೇ ವ್ಯಕ್ತಿಯು ಅದನ್ನು ಮಾರತಕ್ಕದ್ದಲ್ಲ ಅಥವಾ ಬಾಡಿಗೆಗೆ ಕೊಡತಕ್ಕದ್ದಲ್ಲ ಅಥವಾ ಮಾರುವುದು ಅಥವಾ ಬಾಡಿಗೆಗೆ ಕೊಡುವುದರಿಂದ ಯಾವುದೇ ಪ್ರಯೋಜನವನ್ನು ಪಡೆಯತಕ್ಕದ್ದಲ್ಲ ಅಥವಾ ಯಾವನೇ ಬಂದಿಯೊಡನೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಹಣದ ಅಥವಾ ಇತರ ವ್ಯವಹಾರದ ವಹಿವಾಟನ್ನು ಹೊಂದಿರತಕ್ಕದ್ದಲ್ಲ.

9. **ಬಂದೀಖಾನೆಯ ಕರಾರುಗಳಲ್ಲಿ ಅಧಿಕಾರಿಗಳು ಹಿತಾಸಕ್ತಿಯನ್ನು ಹೊಂದಿರತಕ್ಕದ್ದಲ್ಲ.-** ಬಂದೀಖಾನೆಯ ಯಾವನೇ ಅಧಿಕಾರಿಯು ಅಥವಾ ಅವನಿಗಾಗಿ ನ್ಯಾಸದಲ್ಲಿರುವ ಅಥವಾ ಅವನಿಂದ ನಿಯೋಜಿತನಾದ ಯಾವನೇ ವ್ಯಕ್ತಿಯು ಬಂದೀಖಾನೆಗೆ ಯಾವುದೇ ವಸ್ತುವಿನ ಸರಬರಾಜಿಗಾಗಿನ ಯಾವುದೇ ಕರಾರಿನಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾದ ಯಾವುದೇ ಹಿತಾಸಕ್ತಿಯನ್ನು ಹೊಂದಿರತಕ್ಕದ್ದಲ್ಲ ಅಥವಾ ಬಂದೀಖಾನೆಯ ಪರವಾಗಿ ಅಥವಾ ಬಂದಿಗೆ ಸೇರಿದ ಯಾವುದೇ ವಸ್ತುವಿನ ಮಾರಾಟ ಅಥವಾ ಖರೀದಿಯಿಂದ ಪ್ರತ್ಯಕ್ಷ ಅಥವಾ ಪರೋಕ್ಷನಾಗಿ ಯಾವುದೇ ಪ್ರಯೋಜನವನ್ನು ಅವನು ಪಡೆಯತಕ್ಕದ್ದಲ್ಲ.

## ಸೂಪರಿಂಟೆಂಡೆಂಟ್

**10. ಸೂಪರಿಂಟೆಂಡೆಂಟ್.-** (1) ಇನ್ಸ್‌ಪೆಕ್ಟರ್ ಜನರಲ್ಲನ ಆದೇಶಗಳಿಗೊಳಪಟ್ಟು ಸೂಪರಿಂಟೆಂಡೆಂಟನು ಕಲ್ಯಾಣ, ಶಿಸ್ತು, ದುಡಿಮೆ, ವೆಚ್ಚ, ದಂಡನೆ ಮತ್ತು ನಿಯಂತ್ರಣ - ಇವುಗಳಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಬಗ್ಗೆ ಬಂದೀಖಾನೆಯ ವ್ಯವಸ್ಥಾಪನೆಯನ್ನು ನಡೆಸತಕ್ಕದ್ದು.

(2) ರಾಜ್ಯ ಸರ್ಕಾರವು ಕೊಡಬಹುದಾದಂಥ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಕ್ಕೊಳಪಟ್ಟು ಕೇಂದ್ರ ಬಂದೀಖಾನೆಯನ್ನು ಹೊರತುಪಡಿಸಿ ಇತರ ಬಂದೀಖಾನೆಯ ಸೂಪರಿಂಟೆಂಡೆಂಟನು, ಜಿಲ್ಲಾ ಮ್ಯಾಜಿಸ್ಟ್ರೇಟನು ಆ ಬಂದೀಖಾನೆಗೆ ಸಂಬಂಧಿಸಿದಂತೆ ಕೊಡಬಹುದಾದಂಥ, ಈ ಅಧಿನಿಯಮ ಅಥವಾ ಅದರ ಮೇರೆಗಿನ ಯಾವುದೇ ನಿಯಮಕ್ಕೆ ಅಸಂಗತವಲ್ಲದ ಎಲ್ಲಾ ಆದೇಶಗಳನ್ನು ಪಾಲಿಸತಕ್ಕದ್ದು ಮತ್ತು ಅಂಥ ಎಲ್ಲಾ ಆದೇಶಗಳು ಮತ್ತು ಅದರ ಮೇರೆಗೆ ಕೈಗೊಂಡ ಕ್ರಮದ ಬಗ್ಗೆ ಇನ್ಸ್‌ಪೆಕ್ಟರ್ ಜನರಲ್ಲನಿಗೆ ವರದಿ ಮಾಡತಕ್ಕದ್ದು:

ಪರಂತು, ಜಿಲ್ಲಾ ಮ್ಯಾಜಿಸ್ಟ್ರೇಟನು ಕೂಡಲೇ ಅನುಸಮರ್ಥನೆಗಾಗಿ ಅಂಥ ಆದೇಶದ ಒಂದು ಪ್ರತಿಯನ್ನು ಬಂದೀಖಾನೆಗಳ ಇನ್ಸ್‌ಪೆಕ್ಟರ್ ಜನರಲ್ಲನಿಗೆ ಕಳುಹಿಸಿಕೊಡತಕ್ಕದ್ದು.

**11. ಸೂಪರಿಂಟೆಂಡೆಂಟನು ಇಟ್ಟುಕೊಂಡು ಬರಬೇಕಾದ ದಾಖಲೆಗಳು.-** ಸೂಪರಿಂಟೆಂಡೆಂಟನು ಈ ಕೆಳಕಂಡ ದಾಖಲೆಗಳನ್ನು ಇಡತಕ್ಕದ್ದು ಅಥವಾ ಇಟ್ಟುಕೊಂಡು ಬರುವಂತೆ ಮಾಡತಕ್ಕದ್ದು:-

(1) ಪ್ರವೇಶ ಪಡೆದ ಬಂದಿಗಳ ರಿಜಿಸ್ಟರು;

(2) ಪ್ರತಿಯೊಬ್ಬ ಬಂದಿಯನ್ನು ಯಾವಾಗ ಬಿಡುಗಡೆ ಮಾಡಬೇಕೋ ಅದನ್ನು ತೋರಿಸುವ ಪುಸ್ತಕ;

(3) ಬಂದೀಖಾನೆಯ ಅಪರಾಧಿಗಳಿಗಾಗಿ, ಬಂದಿಗಳಿಗೆ ವಿಧಿಸಿದ ದಂಡನೆಯನ್ನು ನಮೂದಿಸುವುದಕ್ಕಾಗಿನ ದಂಡನೆಯ ಪುಸ್ತಕ;

(4) ಬಂದೀಖಾನೆಯ ಆಡಳಿತಕ್ಕೆ ಸಂಬಂಧಿಸಿದ ಯಾವುವೇ ವಿಷಯಗಳಿಗೆ ಸಂಬಂಧಪಟ್ಟಂತೆ ಸಂದರ್ಶಕರು ಮಾಡಿದ ಯಾವುದೇ ಅಭಿಪ್ರಾಯೋಕ್ತಿಯನ್ನು ನಮೂದು ಮಾಡುವುದಕ್ಕಾಗಿ ಸಂದರ್ಶಕರ ಪುಸ್ತಕ;

(5) ಬಂದಿಗಳಿಂದ ತೆಗೆದುಕೊಂಡ ಹಣ ಮತ್ತು ಇತರ ವಸ್ತುಗಳ ದಾಖಲೆ; ಮತ್ತು

(6) ನಿಯಮಿಸಬಹುದಾದಂಥ ಇತರ ಎಲ್ಲಾ ದಾಖಲೆಗಳು.

## ವೈದ್ಯಕೀಯ ಅಧಿಕಾರಿ

**12. ವೈದ್ಯಕೀಯ ಅಧಿಕಾರಿಯ ಕರ್ತವ್ಯಗಳು.-** ಸೂಪರಿಂಟೆಂಡೆಂಟನ ನಿಯಂತ್ರಣಕ್ಕೊಳಪಟ್ಟು, ವೈದ್ಯಕೀಯ ಅಧಿಕಾರಿಯು ಬಂದೀಖಾನೆಯ ನೈರ್ಮಲ್ಯ ಮತ್ತು ಆರೋಗ್ಯ ಆಡಳಿತದ ಪ್ರಭಾರವನ್ನು ಹೊಂದಿರತಕ್ಕದ್ದು ಮತ್ತು ನಿಯಮಿಸಬಹುದಾದಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**13. ಕೆಲವು ಪ್ರಕರಣಗಳಲ್ಲಿ ವೈದ್ಯಕೀಯ ಅಧಿಕಾರಿಯು ವರದಿ ಮಾಡತಕ್ಕದ್ದು.-** ವೈದ್ಯಕೀಯ ಅಧಿಕಾರಿಗೆ, ಬಂದಿಯು ಯಾವ ಶಿಸ್ತು ಅಥವಾ ಉಪಚಾರಕ್ಕೆ ಒಳಪಟ್ಟಿರುತ್ತಾನೋ ಆ ಶಿಸ್ತು ಅಥವಾ ಉಪಚಾರವು ಅವನ ಮನಸ್ಸಿಗೆ ಹಾನಿಕರವಾಗಿ ಬಾಧಕವನ್ನುಂಟು ಮಾಡಿದೆ ಎಂದು ಅಥವಾ ಉಂಟು ಮಾಡಬಹುದಾದ ಸಂಭವವಿದೆಯೆಂದು ನಂಬಲು ಕಾರಣವಿರುವಾಗಲೆಲ್ಲ, ಆ ವೈದ್ಯಕೀಯ ಅಧಿಕಾರಿಯು, ಅವನು ಯುಕ್ತವೆಂದು ಯೋಚಿಸಬಹುದಾದಂಥ ಅಭಿಪ್ರಾಯೋಕ್ತಿಗಳೊಂದಿಗೆ ಸೂಪರಿಂಟೆಂಡೆಂಟನಿಗೆ ಬರಹದಲ್ಲಿ ಆ ಪ್ರಕರಣದ ಬಗ್ಗೆ ವರದಿ ಮಾಡತಕ್ಕದ್ದು. ಸೂಪರಿಂಟೆಂಡೆಂಟನು, ತಕ್ಷಣವೇ ಅಂಥ ವರದಿಯನ್ನು, ಅದರ ಬಗ್ಗೆ ಅವನ ಆದೇಶಗಳೊಂದಿಗೆ, ಮಾಹಿತಿಗಾಗಿ ಇನ್ಸ್‌ಪೆಕ್ಟರ್ ಜನರಲ್ಲನಿಗೆ ಕಳುಹಿಸಿ ಕೊಡತಕ್ಕದ್ದು.

**14. ಬಂದಿಯ ಮರಣದ ಬಗ್ಗೆ ವರದಿ.-** ಯಾವನೇ ಬಂದಿಯು ಮರಣ ಹೊಂದಿದ ಮೇಲೆ ವೈದ್ಯಕೀಯ ಅಧಿಕಾರಿಯು ತಕ್ಷಣವೇ ಈ ಕೆಳಕಂಡ ವಿವರಗಳನ್ನು, ಅವುಗಳನ್ನು ಖಚಿತಪಡಿಸಿಕೊಳ್ಳಬಹುದಾದಷ್ಟರ ಮಟ್ಟಿಗೆ ಒಂದು ರಿಜಿಸ್ಟರಿನಲ್ಲಿ ದಾಖಲು ಮಾಡತಕ್ಕದ್ದು, ಎಂದರೆ,-

(1) ಮೃತನು, ಯಾವ ದಿವಸದಂದು ಕಾಯಿಲೆಯ ಬಗ್ಗೆ ಮೊದಲ ಬಾರಿಗೆ ಹೇಳಿಕೊಂಡನೋ ಅಥವಾ ಕಾಯಿಲೆಯಾಗಿರುವುದಾಗಿ ಕಂಡುಬಂದ ದಿವಸ;

(2) ಆ ದಿವಸ ಅವನನ್ನು ತೊಡಗಿಸಿಕೊಂಡಂಥ ದುಡಿಮೆ ಯಾವುದಾದರೂ ಇದ್ದರೆ, ಅದು;

(3) ಆ ದಿವಸದಂದು ಅವನ ಆಹಾರದ ಪ್ರಮಾಣ;

(4) ವೈದ್ಯಕೀಯ ಅಧಿಕಾರಿಗೆ ಆ ಕಾಯಿಲೆಯ ಬಗ್ಗೆ ಮೊದಲ ಬಾರಿಗೆ ತಿಳಿಸಿದಂಥ ದಿವಸ;

(5) ಅವನನ್ನು ಆಸ್ಪತ್ರೆಗೆ ಸೇರಿಸಲಾದಂಥ ದಿವಸ;

(6) ಆ ರೋಗದ ಸ್ವರೂಪ;

(7) ಅವನ ಮರಣಕ್ಕೆ ಮುಂಚೆ ಮೃತನನ್ನು ವೈದ್ಯಕೀಯ ಅಧಿಕಾರಿ ಅಥವಾ ಅಧೀನ ವೈದ್ಯಕೀಯ ಅಧಿಕಾರಿ ಕೊನೆಯ ಸಲ ನೋಡಿದ್ದು ಯಾವಾಗ;

(8) ಬಂದಿಯು ಯಾವಾಗ ಮೃತನಾದನು ಮತ್ತು ಅದಕ್ಕಾಗಿನ ಕಾರಣಗಳು; ಮತ್ತು

(9) ಅಗತ್ಯವೆಂದು ವೈದ್ಯಕೀಯ ಅಧಿಕಾರಿಗೆ ಕಂಡುಬಂದ ಯಾವುದೇ ವಿಶೇಷ ಷರಾದೊಂದಿಗೆ (ಮರಣೋತ್ತರ ಪರೀಕ್ಷೆಯನ್ನು ಮಾಡಿರುವ ಪ್ರಕರಣದಲ್ಲಿ), ಮರಣದ ತರುವಾಯ ಬಾಹ್ಯ ಸ್ವರೂಪಗಳ ವೃತ್ತಾಂತವನ್ನು ದಾಖಲು ಮಾಡಿದ ವಿವರಗಳ ಪ್ರತಿಯನ್ನು, ಆ ದಾಖಲೆಯನ್ನು ಮಾಡಿದ ತರುವಾಯ ಆದಷ್ಟು ಬೇಗ ಇನ್ಸ್‌ಪೆಕ್ಟರ್ ಜನರಲ್ಲನಿಗೆ ಮತ್ತು ಮೃತನಾದ ಬಂದಿಯ ತೀರ ಹತ್ತಿರದ ಸಂಬಂಧಿಗಳಿಗೆ ಕಳುಹಿಸತಕ್ಕದ್ದು.

## ಜೈಲರ್

**15. ಜೈಲರ್:-** (1) ಜೈಲರನು ಬೇರೆ ಕಡೆ ವಾಸಿಸಲು ಸೂಪರಿಂಟೆಂಡೆಂಟನು ಬರಹದಲ್ಲಿ ಅನುಮತಿಯನ್ನು ಕೊಟ್ಟ ಹೊರತು ಬಂದೀಖಾನೆಯಲ್ಲಿ ವಾಸಿಸತಕ್ಕದ್ದು.

(2) ಜೈಲರನು ಬರಹದಲ್ಲಿ ಇನ್ಸ್‌ಪೆಕ್ಟರ್ ಜನರಲ್ಲನ ಮಂಜೂರಾತಿಯಿಲ್ಲದೆ ಯಾವುದೇ ಇತರ ನಿಯೋಜನೆಯಲ್ಲಿ ಸಂಬಂಧವನ್ನು ಹೊಂದಿರತಕ್ಕದ್ದಲ್ಲ.

**16. ಜೈಲರನು ಬಂದಿಯ ಮರಣದ ಬಗ್ಗೆ ನೋಟೀಸನ್ನು ಕೊಡತಕ್ಕದ್ದು:-** ಬಂದಿಯು ಮರಣ ಹೊಂದಿದ ಮೇಲೆ, ಜೈಲರನು ಆ ಬಗ್ಗೆ ಸೂಪರಿಂಟೆಂಡೆಂಟನಿಗೆ ಮತ್ತು ವೈದ್ಯಕೀಯ ಅಧಿಕಾರಿಗೆ ಕೂಡಲೇ ತಿಳಿಸತಕ್ಕದ್ದು.

**17. ಜೈಲರನ ಜವಾಬ್ದಾರಿಗಳು:-** ಜೈಲರನು 11ನೇ ಪ್ರಕರಣದ ಮೇರೆಗೆ ಇಟ್ಟಿರಬೇಕಾದ ದಾಖಲೆಗಳ ಸುರಕ್ಷಿತ ಅಭಿರಕ್ಷೆಗಾಗಿ, ಅವನ ರಕ್ಷಣೆಗೆ ನಂಬಿಕೆಯಿಂದ ಒಪ್ಪಿಸಲಾದ ಒಪ್ಪಿಸುವಿಕೆ ವಾರೆಂಟುಗಳು ಮತ್ತು ಎಲ್ಲಾ ಇತರ ದಸ್ತಾವೇಜುಗಳಿಗಾಗಿ ಮತ್ತು ಬಂದಿಗಳಿಂದ ತೆಗೆದುಕೊಂಡ ಹಣ ಮತ್ತು ಇತರ ವಸ್ತುಗಳಿಗಾಗಿ ಜವಾಬ್ದಾರನಾಗಿರತಕ್ಕದ್ದು.

**18. ಜೈಲರನು ರಾತ್ರಿಯಲ್ಲಿ ಹಾಜರಿರತಕ್ಕದ್ದು:-** ಜೈಲರನು, ಸೂಪರಿಂಟೆಂಡೆಂಟನಿಂದ ಬರಹದಲ್ಲಿ ಅನುಮತಿಯನ್ನು ಪಡೆದ ಹೊರತು ಬಂದೀಖಾನೆಯಿಂದ ರಾತ್ರಿಯಲ್ಲಿ ಗೈರು ಹಾಜರಾಗಿರತಕ್ಕದ್ದಲ್ಲ. ಅನಿವಾರ್ಯವಾದ ಅವಶ್ಯಕತೆಯಿಂದ ಯಾವುದೇ ರಾತ್ರಿಯಲ್ಲಿ ಅನುಮತಿಯಿಲ್ಲದೆ ಗೈರು ಹಾಜರಾದರೆ ಅವನು ಕೂಡಲೇ ಆ ಸಂಗತಿಯನ್ನು ಮತ್ತು ಅದಕ್ಕಾಗಿನ ಕಾರಣವನ್ನು ಸೂಪರಿಂಟೆಂಡೆಂಟನಿಗೆ ವರದಿ ಮಾಡತಕ್ಕದ್ದು.

**19. ಉಪ ಮತ್ತು ಸಹಾಯಕ ಜೈಲರುಗಳ ಅಧಿಕಾರಗಳು:-** ಬಂದೀಖಾನೆಗೆ ಒಬ್ಬ ಉಪ ಜೈಲರು ಅಥವಾ ಸಹಾಯಕ ಜೈಲರನನ್ನು ನೇಮಕ ಮಾಡಿರುವಲ್ಲಿ, ಅವನು ಸೂಪರಿಂಟೆಂಡೆಂಟನ ಆದೇಶಗಳಿಗೊಳಪಟ್ಟು, ಈ ಅಧಿನಿಯಮದ ಅಥವಾ ಅದರ ಮೇರೆಗಿನ ಯಾವುದೇ ನಿಯಮದ ಮೇರೆಗೆ ಜೈಲರನ ಯಾವುದೇ ಕರ್ತವ್ಯವನ್ನು ನೆರವೇರಿಸಲು ಸಕ್ಷಮನಾಗಿರತಕ್ಕದ್ದು ಮತ್ತು ಅವನ ಎಲ್ಲಾ ಹೊಣೆಗಾರಿಕೆಗಳಿಗೆ ಒಳಪಟ್ಟಿರತಕ್ಕದ್ದು.

## ಅಧೀನ ಅಧಿಕಾರಿಗಳು

**20. ಗೇಟ್ ಕೀಪರನ ಕರ್ತವ್ಯಗಳು:-** ಗೇಟ್ ಕೀಪರನೆಂದು ಕೆಲಸ ಮಾಡುತ್ತಿರುವ ಅಧಿಕಾರಿ ಅಥವಾ ಬಂದೀಖಾನೆಯ ಯಾವನೇ ಇತರ ಅಧಿಕಾರಿಯು ಬಂದೀಖಾನೆಯೊಳಕ್ಕೆ ಅಥವಾ ಅದರ ಹೊರಗಡೆಗೆ ಒಯ್ಯಲಾದ ಯಾವುದೇ ವಸ್ತುವನ್ನು ಪರೀಕ್ಷಿಸಬಹುದು ಮತ್ತು ಬಂದೀಖಾನೆಯೊಳಕ್ಕೆ ಅಥವಾ ಅದರ ಹೊರಗಡೆ ಯಾವುದೇ ನಿಷೇಧಿತ ವಸ್ತುವನ್ನು ತರುತ್ತಿರುವನೆಂದು ಅಥವಾ ಬಂದೀಖಾನೆಗೆ ಸೇರಿದ ಯಾವುದೇ ಸ್ವತ್ತನ್ನು ಹೊರಗಡೆಗೆ ಒಯ್ಯುತ್ತಿದ್ದಾನೆಂದು ಶಂಕಿಸಲಾದ ಯಾವನೇ ವ್ಯಕ್ತಿಯನ್ನು ತಡೆಯಬಹುದು ಮತ್ತು ಶೋಧಿಸಬಹುದು ಅಥವಾ ಶೋಧಿಸುವಂತೆ ಮಾಡಬಹುದು ಮತ್ತು ಯಾವುದೇ ಅಂಥ ವಸ್ತು ಅಥವಾ ಸ್ವತ್ತು ಸಿಕ್ಕಿದರೆ ಅದರ ಬಗ್ಗೆ ಜೈಲರನಿಗೆ ಕೂಡಲೇ ತಿಳಿಸತಕ್ಕದ್ದು.

**21. ಅಧೀನ ಅಧಿಕಾರಿಗಳು ರಜೆಯನ್ನು ಪಡೆದುಕೊಳ್ಳದೆ ಗೈರು ಹಾಜರಾಗಿರತಕ್ಕದ್ದಲ್ಲ:-** ಜೈಲರನಿಗೆ ಅಧೀನರಾಗಿರುವ ಅಧಿಕಾರಿಗಳು, ಸೂಪರಿಂಟೆಂಡೆಂಟನಿಂದ ಅಥವಾ ಜೈಲರನಿಂದ ಅನುಮತಿಯನ್ನು ಪಡೆಯದೆ ಬಂದೀಖಾನೆಯಿಂದ ಗೈರುಹಾಜರಾಗಿರತಕ್ಕದ್ದಲ್ಲ.

**22. ನಿರ್ಣೀತ ಅಪರಾಧಿ ಅಧಿಕಾರಿಗಳು:-** ಬಂದೀಖಾನೆಗಳ ಅಧಿಕಾರಿಗಳೆಂದು ನೇಮಕಗೊಂಡಿರುವ ಬಂದಿಗಳನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಲೋಕ ನೌಕರರಾಗಿರುವುದಾಗಿ ಭಾವಿಸತಕ್ಕದ್ದು.

## ಅಧ್ಯಾಯ - IV

## ಬಂದಿಗಳನ್ನು ಸೇರಿಸಿಕೊಳ್ಳುವುದು, ಸ್ಥಳಾಂತರಿಸುವುದು ಮತ್ತು ಬಿಡುಗಡೆ ಮಾಡುವುದು

**23. ಸೇರಿಸಿಕೊಂಡ ಮೇಲೆ ಬಂದಿಗಳನ್ನು ಪರೀಕ್ಷಿಸತಕ್ಕದ್ದು:-** (1) ಬಂದಿಯನ್ನು ಬಂದೀಖಾನೆಗೆ ಸೇರಿಸಿಕೊಂಡಾಗಲೆಲ್ಲ ಅವನನ್ನು ಶೋಧಿಸತಕ್ಕದ್ದು ಮತ್ತು ಅವನಿಂದ ಎಲ್ಲಾ ಆಯುಧಗಳು ಮತ್ತು ನಿಷೇಧಿತ ವಸ್ತುಗಳನ್ನು ತೆಗೆದುಕೊಳ್ಳತಕ್ಕದ್ದು.

(2) ಪ್ರತಿಯೊಬ್ಬ ಅಪರಾಧಿಕ ಬಂದಿಯನ್ನೂ ಸಹ, ಸೇರಿಸಿಕೊಂಡ ತರುವಾಯ ಸಾಧ್ಯವಾದಷ್ಟು ಬೇಗ ವೈದ್ಯಕೀಯ ಅಧಿಕಾರಿಯ ಸಾಮಾನ್ಯ ಅಥವಾ ವಿಶೇಷ ಆದೇಶಗಳ ಮೇರೆಗೆ ಪರೀಕ್ಷಿಸತಕ್ಕದ್ದು. ಅವನು, ಜೈಲರನು ಇಟ್ಟುಕೊಂಡು ಬರಬೇಕಾದ ಪುಸ್ತಕದಲ್ಲಿ ಬಂದಿಯ ಆರೋಗ್ಯ ಸ್ಥಿತಿ ಮತ್ತು ಅವನ ಮೈಮೇಲೆ ಇರುವ ಯಾವುವೇ ಗಾಯಗಳು ಅಥವಾ ಗುರುತುಗಳು, ಅವನನ್ನು ಕಠಿಣ ಕಾರಾವಾಸದ ಶಿಕ್ಷೆಗೆ ಗುರಿಪಡಿಸಿದರೆ ಅವನು ಅವನಿಗೆ ಯೋಗ್ಯವಾದ ದುಡಿಮೆಯ ವರ್ಗ ಮತ್ತು ವೈದ್ಯಕೀಯ ಅಧಿಕಾರಿಯು ಸೇರಿಸಲು ಸೂಕ್ತವೆಂದು ಯೋಚಿಸುವಂಥ ಯಾವುವೇ ಅಭಿಪ್ರಾಯೋಕ್ತಿಗಳನ್ನು ನಮೂದು ಮಾಡತಕ್ಕದ್ದು ಅಥವಾ ನಮೂದಿಸುವಂತೆ ಮಾಡತಕ್ಕದ್ದು.

(3) ಮಹಿಳಾ ಬಂದಿಯ ಸಂದರ್ಭದಲ್ಲಿ, ಶೋಧನೆ ಮತ್ತು ಪರೀಕ್ಷೆಯನ್ನು ಮಹಿಳಾ ಅಧೀನ ವೈದ್ಯಕೀಯ ಅಧಿಕಾರಿಯು ಯಾರಾದರೂ ಇದ್ದರೆ ಅವರು ಅಥವಾ ವೈದ್ಯಕೀಯ ಅಧಿಕಾರಿಯ ಸಾಮಾನ್ಯ ಅಥವಾ ವಿಶೇಷ ಆದೇಶದ ಮೇರೆಗೆ ಮೇಟ್ರನು ಶೋಧನೆ ಅಥವಾ ಪರೀಕ್ಷೆಯನ್ನು ನಡೆಸತಕ್ಕದ್ದು.

**24. ಬಂದಿಗಳ ಸಾಮಾನುಗಳು:-** ಯಾವುದರ ಬಗ್ಗೆ ಸಕ್ಷಮ ನ್ಯಾಯಾಲಯವು ಯಾವುದೇ ಆದೇಶವನ್ನು ಮಾಡಿರುವುದೋ ಮತ್ತು ಯಾವುದನ್ನು ಯಾರೇ ಅಪರಾಧಿಕ ಬಂದಿಯು ಬಂದೀಖಾನೆಯೊಳಕ್ಕೆ ಯುಕ್ತ ಅಧಿಕಾರದಿಂದ ತರಬಹುದೋ ಅಥವಾ ಆತನ ಉಪಯೋಗಕ್ಕಾಗಿ ಬಂದೀಖಾನೆಗೆ ಕಳುಹಿಸಬಹುದೋ ಆ ಎಲ್ಲಾ ಹಣ ಅಥವಾ ಇತರ ವಸ್ತುಗಳನ್ನು ಜೈಲರನ ಅಭಿರಕ್ಷೆಯಲ್ಲಿಡತಕ್ಕದ್ದು ಮತ್ತು ಬಂದಿಗೆ ಅದನ್ನು ತಿಳಿಸತಕ್ಕದ್ದು ಮತ್ತು ನಿಯಮಿಸಿದ ರಿಜಿಸ್ಟರಿನಲ್ಲಿ ಅವನ ರುಜುವನ್ನು ಪಡೆದುಕೊಳ್ಳತಕ್ಕದ್ದು.

**25. ಬಂದಿಗಳನ್ನು ಸ್ಥಳಾಂತರಿಸುವುದು ಮತ್ತು ಬಿಡುಗಡೆ ಮಾಡುವುದು:-** (1) ಯಾವುದೇ ಇತರ ಬಂದೀಖಾನೆಗೆ ಸ್ಥಳಾಂತರಿಸುವುದಕ್ಕೆ ಮುಂಚೆ, ಎಲ್ಲಾ ಬಂದಿಗಳನ್ನು ವೈದ್ಯಕೀಯ ಅಧಿಕಾರಿಯು ಪರೀಕ್ಷಿಸತಕ್ಕದ್ದು.

(2) ಯಾವನೇ ವ್ಯಕ್ತಿಯನ್ನು ಒಂದು ಬಂದೀಖಾನೆಯಿಂದ ಇನ್ನೊಂದಕ್ಕೆ ಸ್ಥಳಾಂತರಿಸುವುದಕ್ಕಾಗಿ ಅವನನ್ನು ಅನರ್ಹನನ್ನಾಗಿಸುವ ಯಾವುದೇ ಕಾಯಿಲೆಯಿಂದ ಆ ಬಂದಿಯು ಮುಕ್ತನಾಗಿರುವನೆಂದು ಆ ವೈದ್ಯಕೀಯ ಅಧಿಕಾರಿಯು ಪ್ರಮಾಣೀಕರಿಸಿದ ಹೊರತು ಸ್ಥಳಾಂತರಿಸತಕ್ಕದ್ದಲ್ಲ.

(3) ಯಾವನೇ ಬಂದಿಯು ತೀವ್ರವಾದ ಅಥವಾ ಅಪಾಯಕಾರಿಯಾದ ರೋಗದಿಂದ ನರಳುತ್ತಿದ್ದರೆ ಅಥವಾ ವೈದ್ಯಕೀಯ ಅಧಿಕಾರಿಯ ಅಭಿಪ್ರಾಯದಲ್ಲಿ, ಅಂಥ ಬಿಡುಗಡೆಯು ಸುರಕ್ಷಿತವಾಗುವವರೆಗೆ, ಬಂದೀಖಾನೆಯಿಂದ ಅವನ ಇಚ್ಛೆಗೆ ವಿರೋಧವಾಗಿ ಬಿಡುಗಡೆ ಮಾಡತಕ್ಕದ್ದಲ್ಲ.

## ಅಧ್ಯಾಯ - V

## ಬಂದಿಗಳ ಶಿಸ್ತು

**26. ಬಂದಿಗಳನ್ನು ಪ್ರತ್ಯೇಕಿಸುವುದು:-** ಬಂದಿಗಳನ್ನು ಪ್ರತ್ಯೇಕಿಸುವುದಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಅಗತ್ಯತೆಗಳು ಈ ಕೆಳಕಂಡಂತೆ ಇರುತ್ತವೆ:-

(1) ಮಹಿಳೆಯರು ಹಾಗೂ ಪುರುಷ ಬಂದಿಗಳನ್ನು ಒಳಗೊಂಡಿರುವ ಬಂದೀಖಾನೆಯಲ್ಲಿ, ಮಹಿಳೆಯರನ್ನು ಪ್ರತ್ಯೇಕ ಕಟ್ಟಡಗಳಲ್ಲಿ ಅಥವಾ ಒಂದೇ ಕಟ್ಟಡದ ಪ್ರತ್ಯೇಕ ಭಾಗಗಳಲ್ಲಿ ಅವರು ಪುರುಷ ಬಂದಿಗಳನ್ನು ನೋಡುವುದನ್ನು ಅಥವಾ ಅವರೊಡನೆ ಮಾತನಾಡುವುದನ್ನು ಅಥವಾ ಯಾವುದೇ ಸಂಪರ್ಕವನ್ನು ಹೊಂದುವುದನ್ನು ತಡೆಗಟ್ಟುವಂಥ ರೀತಿಯಲ್ಲಿ ಸೆರೆಯಲ್ಲಿಡತಕ್ಕದ್ದು;

(2) ಬಂದೀಖಾನೆಯಲ್ಲಿ ಇಪ್ಪತ್ತೊಂದು ವರ್ಷಕ್ಕಿಂತ ಕಡಿಮೆ ವಯಸ್ಸಿನ ಪುರುಷ ಬಂದಿಗಳನ್ನು ಬಂಧಿಸಿಟ್ಟಿರುವಲ್ಲಿ ಅವರನ್ನು ಇತರ ಬಂದಿಗಳಿಂದ ಸಂಪೂರ್ಣವಾಗಿ ಪ್ರತ್ಯೇಕವಾಗಿಡುವುದಕ್ಕಾಗಿ ಮತ್ತು ಅವರ ಪೈಕಿ ಯಾರಿಗೆ ಹರಯದ ವಯಸ್ಸು ತುಂಬಿರುವುದೋ ಅವರನ್ನು ಆ ವಯಸ್ಸು ತುಂಬಿಲ್ಲದವರಿಂದ ಪ್ರತ್ಯೇಕವಾಗಿಡುವುದಕ್ಕಾಗಿ ವ್ಯವಸ್ಥೆ ಮಾಡತಕ್ಕದ್ದು;

(3) ನಿರ್ಣೀತ ಅಪರಾಧಿಗಳಲ್ಲದ ಆಪರಾಧಿಕ ಬಂದಿಗಳನ್ನು ನಿರ್ಣೀತ ಅಪರಾಧಿಗಳಾದ ಆಪರಾಧಿಕ ಬಂದಿಗಳಿಂದ ಪ್ರತ್ಯೇಕವಾಗಿಡತಕ್ಕದ್ದು; ಮತ್ತು

(4) 'ಸಿವಿಲ್' ಬಂದಿಗಳನ್ನು ಆಪರಾಧಿಕ ಬಂದಿಗಳಿಂದ ಪ್ರತ್ಯೇಕವಾಗಿಡತಕ್ಕದ್ದು.

**27. ಬಂದಿಗಳನ್ನು ಒಟ್ಟಿಗೆ ಇಡುವುದು ಮತ್ತು ಅವರ ಪ್ರತ್ಯೇಕೀಕರಣ:-** 26ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ನಿರ್ಣೀತ ಅಪರಾಧಿಗಳಾದ ಆಪರಾಧಿಕ ಬಂದಿಗಳನ್ನು ಒಟ್ಟಿಗೆ ಆಗಲಿ ಅಥವಾ ವೈಯಕ್ತಿಕವಾಗಿಯೇ ಆಗಲಿ ಸಣ್ಣ ಕೋಣೆಗಳಲ್ಲಿ ಬಂಧಿಸಿಡಬಹುದು ಅಥವಾ ಭಾಗಶಃ ಒಂದು ರೀತಿಯಲ್ಲಿ ಮತ್ತು ಭಾಗಶಃ ಇನ್ನೊಂದು ರೀತಿಯಲ್ಲಿಡಬಹುದು.

**28. ಏಕಾಂತ ಬಂಧನ:-** ಯಾವುದೆ ಸಣ್ಣ ಕೋಣೆಯನ್ನು, ಏಕಾಂತ ಬಂಧನಕ್ಕಾಗಿ ಬಂದಿಯು ಯಾವುದೇ ಕಾಲದಲ್ಲಿ ಬಂದೀಖಾನೆಯ ಒಬ್ಬ ಅಧಿಕಾರಿಯೊಂದಿಗೆ ಸಂಪರ್ಕಿಸಲು ಸಾಧ್ಯವಾಗುವ ಸಾಧನೋಪಾಯವನ್ನು ಅದರಲ್ಲಿ ಒದಗಿಸಿದ ಹೊರತು, ಉಪಯೋಗಿಸತಕ್ಕದ್ದಲ್ಲ ಮತ್ತು ದಂಡನೆ ಎಂದಾಗಲಿ ಅಥವಾ ಅನ್ಯಥಾ ಇಪ್ಪತ್ತನಾಲ್ಕು ಗಂಟೆಗಳಿಗಿಂತ ಹೆಚ್ಚಾಗಿ ಸಣ್ಣ ಕೋಣೆಯಲ್ಲಿ ಹಾಗೆ ಬಂದಿಸಿಡಲಾದ ಪ್ರತಿಯೊಬ್ಬ ಬಂದಿಯನ್ನು ಕನಿಷ್ಟಪಕ್ಷ ದಿವಸಕ್ಕೆ ಒಂದು ಸಲ ವೈದ್ಯಕೀಯ ಅಧಿಕಾರಿ ಅಥವಾ ಅಧೀನ ವೈದ್ಯಕೀಯ ಅಧಿಕಾರಿಯು ಸಂದರ್ಶಿಸತಕ್ಕದ್ದು.

**29. ಮರಣ ದಂಡನೆಯಲ್ಲಿರುವ ಬಂದಿಗಳು:-** (1) ಮರಣ ದಂಡನೆಯಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯನ್ನು, ಶಿಕ್ಷೆ ವಿಧಿಸಿದ ತರುವಾಯ ಬಂದೀಖಾನೆಗೆ ಅವನು ಬಂದ ಕೂಡಲೇ, ಜೈಲರನು ಅಥವಾ ಅವನ ಆದೇಶದ ಮೂಲಕ ಶೋಧಿಸತಕ್ಕದ್ದು ಮತ್ತು ಜೈಲರನು ಅಪಾಯಕಾರಿಯಾಗಿರುವುದಾಗಿ ಅಥವಾ ಅವನ ಸ್ವಾಧೀನದಲ್ಲಿ ಬಿಡಲು ವಿಹಿತವಾಗಿಲ್ಲದಿರುವುದಾಗಿ ಭಾವಿಸುವಂಥ ಎಲ್ಲಾ ವಸ್ತುಗಳನ್ನು ಅವನಿಂದ ತೆಗೆದುಕೊಳ್ಳತಕ್ಕದ್ದು.

(2) ಅಂಥ ಪ್ರತಿಯೊಬ್ಬ ಬಂದಿಯನ್ನು ಇತರ ಎಲ್ಲಾ ಬಂದಿಗಳಿಂದ ಪ್ರತ್ಯೇಕವಾಗಿ ಒಂದು ಸಣ್ಣ ಕೋಣೆಯಲ್ಲಿ ಬಂಧಿಸಿಡತಕ್ಕದ್ದು ಮತ್ತು ಅವನನ್ನು ಹಗಲುರಾತ್ರಿ ಪಹರೆಯವನ ವಶದಲ್ಲಿಡತಕ್ಕದ್ದು.

## ಅಧ್ಯಾಯ - VI

## ಸಿವಿಲ್ ಮತ್ತು ನಿರ್ಣೀತ ಅಪರಾಧಿಗಳಲ್ಲದ ಆಪರಾಧಿಕ ಬಂದಿಗಳ ಆಹಾರ, ಉಡುಪು ಮತ್ತು ಹಾಸಿಗೆ

**30. ಖಾಸಗಿ ಮೂಲಗಳಿಂದ ಕೆಲವು ಬಂದಿಗಳ ಪೋಷಣೆ:-** ಇನ್ಸ್‌ಪೆಕ್ಟರ್ ಜನರಲ್ಲನ ಪರೀಕ್ಷೆಗೆ ಮತ್ತು ಅವನು ಅನುಮೋದಿಸಬಹುದಾದಂಥ ವಿನಿಯಮಗಳಿಗೆ ಒಳಪಟ್ಟು ಸಿವಿಲ್ ಬಂದಿಯು ಅಥವಾ ನಿರ್ಣೀತ ಅಪರಾಧಿಯಾಗಿಲ್ಲದ ಆಪರಾಧಿಕ ಬಂದಿಯು ತನ್ನನ್ನು ತಾನೇ ಪೋಷಿಸಿಕೊಳ್ಳಲು ಮತ್ತು ಖಾಸಗಿ ಮೂಲಗಳಿಂದ ಸರಿಯಾದ ವೇಳೆಯಲ್ಲಿ ಆಹಾರ, ಉಡುಪು, ಹಾಸಿಗೆ ಅಥವಾ ಲೇಖನ ಸಾಮಗ್ರಿಗಳು, ಪುಸ್ತಕಗಳು, ವೃತ್ತಪತ್ರಿಕೆಗಳು ಅಥವಾ ಇತರ ಅವಶ್ಯ ವಸ್ತುಗಳನ್ನು ಖರೀದಿಸಲು ಅಥವಾ ಸ್ವೀಕರಿಸಲು ಅನುಮತಿಸತಕ್ಕದ್ದು.

**31. ಕೆಲವು ಬಂದಿಗಳ ನಡುವೆ ಆಹಾರ ಮತ್ತು ಉಡುಪಿನ ವರ್ಗಾವಣೆಯ ಬಗ್ಗೆ ಪರಿಬಂಧಗಳು:-** ಯಾವನೇ ಸಿವಿಲ್ ಅಥವಾ ನಿರ್ಣೀತ ಅಪರಾಧಿಯಲ್ಲದ ಆಪರಾಧಿಕ ಬಂದಿಗೆ ಸೇರಿದ ಯಾವುದೇ ಆಹಾರ, ಉಡುಪು, ಹಾಸಿಗೆ ಅಥವಾ ಇತರ ಅವಶ್ಯ ವಸ್ತುಗಳ ಯಾವುದೇ ಭಾಗವನ್ನು, ಯಾವನೇ ಇತರ ಬಂದಿಗೆ ಕೊಡತಕ್ಕದ್ದಲ್ಲ, ಬಾಡಿಗೆಗೆ ಕೊಡತಕ್ಕದ್ದಲ್ಲ ಅಥವಾ ಮಾರಾಟ ಮಾಡತಕ್ಕದ್ದಲ್ಲ ಮತ್ತು ಈ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ಬಂದಿಯು, ಸೂಪರಿಂಟೆಂಡೆಂಟನು ಯುಕ್ತವೆಂದು ಯೋಚಿಸುವಂಥ ಕಾಲದವರೆಗೆ, ಖಾಸಗಿ ಮೂಲಗಳಿಂದ ಆಹಾರವನ್ನು ಖರೀದಿಸುವ ಅಥವಾ ಅದನ್ನು ಸ್ವೀಕರಿಸುವ ವಿಶೇಷಾಧಿಕಾರವನ್ನು ಕಳೆದುಕೊಳ್ಳತಕ್ಕದ್ದು.

**32. ಸಿವಿಲ್ ಮತ್ತು ನಿರ್ಣೀತ ಅಪರಾಧಿಯಲ್ಲದ ಆಪರಾಧಿಕ ಬಂದಿಗಳಿಗೆ ಉಡುಪು ಮತ್ತು ಹಾಸಿಗೆಯ ಸರಬರಾಜು:–** (1) ಸಾಕಷ್ಟು ಉಡುಪು ಮತ್ತು ಹಾಸಿಗೆಯನ್ನು ಅವನು ಒದಗಿಸಿಕೊಳ್ಳಲು ಸಮರ್ಥನಲ್ಲದ ಪ್ರತಿಯೊಬ್ಬ ಸಿವಿಲ್ ಬಂದಿ ಮತ್ತು ನಿರ್ಣೀತ ಅಪರಾಧಿಯಲ್ಲದ ಆಪರಾಧಿಕ ಬಂದಿಗೆ ಅವಶ್ಯಕವಾಗಬಹುದಾದಂಥ ಉಡುಪು ಮತ್ತು ಹಾಸಿಗೆಯನ್ನು ಸೂಪರಿಂಟೆಂಡೆಂಟನು ಸರಬರಾಜು ಮಾಡತಕ್ಕದ್ದು.

(2) ಖಾಸಗಿ ವ್ಯಕ್ತಿಯ ಪರವಾದ ಯಾವುದೇ ಡಿಕ್ರಿ ಅಥವಾ ಆದೇಶದ ಅಮಲ್ಜಾರಿಯಲ್ಲಿ ನ್ಯಾಯಾಲಯವು ಒಬ್ಬ ಸಿವಿಲ್ ಬಂದಿಯನ್ನು ಬಂದೀಖಾನೆಗೆ ಒಪ್ಪಿಸಿರುವಾಗ, ಅಂಥ ವ್ಯಕ್ತಿಯು, ನಿಯಮಗಳು ಯಾವುದಾದರೂ ಇದ್ದರೆ ಅವುಗಳಿಗನುಸಾರವಾಗಿ ನ್ಯಾಯಾಲಯವು ನಿಗದಿಪಡಿಸಬಹುದಾದಂಥ ಮೊಬಲಗನ್ನು ಬಂದಿಯ ಉಡುಪು ಮತ್ತು ಹಾಸಿಗೆಯ ಖರ್ಚನ್ನು ಭರಿಸಲು ಕೂಡಲೇ ನ್ಯಾಯಾಲಯದಲ್ಲಿ ಠೇವಣಿ ಇಡತಕ್ಕದ್ದು ಅಥವಾ ಅದನ್ನು ಇಡುವಂತೆ ಮಾಡತಕ್ಕದ್ದು; ಅಂಥ ಠೇವಣಿಯನ್ನು ಇಡಲು ತಪ್ಪಿದರೆ ಆ ಬಂದಿಯನ್ನು ಬಿಡುಗಡೆ ಮಾಡಬಹುದು.

## ಅಧ್ಯಾಯ – VII
## ಬಂದಿಗಳ ನಿಯೋಜನೆ

**33. ಸಿವಿಲ್ ಬಂದಿಗಳ ನಿಯೋಜನೆ:–** (1) ಸಿವಿಲ್ ಬಂದಿಗಳು ಸೂಪರಿಂಟೆಂಡೆಂಟನ ಅನುಮತಿಯಿಂದ, ಯಾವುದೇ ವ್ಯಾಪಾರ ಅಥವಾ ವೃತ್ತಿಯನ್ನು ನಡೆಸಬಹುದು ಮತ್ತು ಅನುಸರಿಸಬಹುದು.

(2) ಅವರು ಸ್ವಂತ ಉಪಕರಣಗಳನ್ನು ಹೊಂದಿದ್ದು ಮತ್ತು ಬಂದೀಖಾನೆಯ ವೆಚ್ಚದಲ್ಲಿ ಅವುಗಳನ್ನು ಇಟ್ಟುಕೊಂಡು ಬಂದಿಲ್ಲದ ಸಿವಿಲ್ ಬಂದಿಗಳಿಗೆ ಅವರ ಪೂರ್ತಿ ಗಳಿಕೆಗಳನ್ನು ಸ್ವೀಕರಿಸಲು ಅನುಮತಿಸತಕ್ಕದ್ದು; ಆದರೆ, ಉಪಕರಣಗಳನ್ನು ಒದಗಿಸಲಾಗಿರುವ ಅಥವಾ ಬಂದೀಖಾನೆಯ ವೆಚ್ಚದಲ್ಲಿ ಅವುಗಳನ್ನು ಇಟ್ಟುಕೊಂಡು ಬಂದಿರುವಂಥವರ ಗಳಿಕೆಗಳು ಉಪಕರಣಗಳ ಬಳಕೆ ಮತ್ತು ನಿರ್ವಹಣೆಯ ಖರ್ಚಿಗಾಗಿ ಸೂಪರಿಂಟೆಂಡೆಂಟನು ನಿರ್ಧರಿಸಬೇಕಾದ ಕಳೆತಕ್ಕೆ ಒಳಪಟ್ಟಿರತಕ್ಕದ್ದು.

**34. ಆಪರಾಧಿಕ ಬಂದಿಗಳ ನಿಯೋಜನೆ:–** (1) ದುಡಿಮೆಯ ಶಿಕ್ಷೆಗೆ ಒಳಪಟ್ಟಿರುವ ಅಥವಾ ಅವನ ಸ್ವಂತ ಇಚ್ಛೆಯ ಮೇರೆಗೆ ದುಡಿಮೆಗಾಗಿ ನಿಯೋಜಿಸಲಾಗಿರುವ ಯಾವನೇ ಆಪರಾಧಿಕ ಬಂದಿಯನ್ನು ತುರ್ತು ಸಂದರ್ಭದಲ್ಲಿ ಬರಹದಲ್ಲಿನ ಸೂಪರಿಂಟೆಂಡೆಂಟನ ಮಂಜೂರಾತಿಯಿಂದ ಹೊರತು, ಯಾವುದೇ ಒಂದು ದಿವಸದಲ್ಲಿ ಎಂಟು ಗಂಟೆಗಳಿಗಿಂತ ಹೆಚ್ಚು ಕಾಲ ದುಡಿಮೆ ಮಾಡಿಸಿಕೊಳ್ಳತಕ್ಕದ್ದಲ್ಲ.

(2) ವೈದ್ಯಕೀಯ ಅಧಿಕಾರಿಗಳು ದುಡಿಯುತ್ತಿರುವ ಬಂದಿಗಳನ್ನು, ಅವರನ್ನು ನಿಯೋಜಿಸಿಕೊಂಡಿರುವಾಗ ಕಾಲಕಾಲಕ್ಕೆ ಪರೀಕ್ಷಿಸತಕ್ಕದ್ದು ಮತ್ತು ಪ್ರತಿ ಹದಿನೈದು ದಿವಸಗಳಲ್ಲಿ ಕನಿಷ್ಠಪಕ್ಷ ಒಂದು ಬಾರಿ ದುಡಿಮೆಗಾಗಿ ನಿಯೋಜಿಸಲಾಗಿರುವ ಪ್ರತಿಯೊಬ್ಬನ ಇತಿವೃತ್ತದಲ್ಲಿ ಆ ಕಾಲದಲ್ಲಿ ಅಂಥ ಬಂದಿಯ ತೂಕ ಮತ್ತು ಸಾಮಾನ್ಯ ಆರೋಗ್ಯದ ಬಗ್ಗೆ ದಾಖಲ್ಮಾಡುವಂತೆ ಮಾಡತಕ್ಕದ್ದು.

(3) ವೈದ್ಯಕೀಯ ಅಧಿಕಾರಿಯು ಯಾವನೇ ಬಂದಿಯ ಆರೋಗ್ಯವು ಯಾವುದೇ ಬಗೆಯ ನಿಯೋಜನೆ ಅಥವಾ ಯಾವುದೇ ವರ್ಗದ ದುಡಿಮೆಯಿಂದ ಕೆಡುತ್ತದೆ ಎಂದು ಅಭಿಪ್ರಾಯ ಪಡುವಾಗ, ಅಂಥ ಬಂದಿಯನ್ನು ಆ ದುಡಿಮೆಯಲ್ಲಿ ನಿಯೋಜಿಸತಕ್ಕದ್ದಲ್ಲ; ಆದರೆ, ಅವನನ್ನು ಆ ವೈದ್ಯಕೀಯ ಅಧಿಕಾರಿಯು ಅವನಿಗೆ ಸೂಕ್ತವೆಂದು ಪರ್ಯಾಲೋಚಿಸುವಂಥ ಇತರ ಬಗೆಯ ಅಥವಾ ವರ್ಗದ ದುಡಿಮೆಯಲ್ಲಿ ಇಡತಕ್ಕದ್ದು.

**35. ಸಾದಾ ಕಾರಾವಾಸದ ಶಿಕ್ಷೆಗೆ ಗುರಿಯಾಗಿರುವ ಆಪರಾಧಿಕ ಬಂದಿಗಳ ನಿಯೋಜನೆ:–** ಸೂಪರಿಂಟೆಂಡೆಂಟನು ಸಾದಾ ಕಾರಾವಾಸ ಶಿಕ್ಷೆಗೆ ಗುರಿಯಾಗಿರುವ ಎಲ್ಲಾ ಆಪರಾಧಿಕ ಬಂದಿಗಳ ನಿಯೋಜನೆಗಾಗಿ, ಅವರು ಹಾಗೆ ಇಚ್ಛಿಸಿದರೆ ಮತ್ತು ಆ ವರೆಗೆ ವ್ಯವಸ್ಥೆಯನ್ನು ಮಾಡತಕ್ಕದ್ದು:

ಪರಂತು, ಕಠಿಣ ಕಾರಾವಾಸದ ಶಿಕ್ಷೆಗೆ ಗುರಿಯಾಗಿರದ ಯಾವನೇ ಬಂದಿಯನ್ನು ಕೆಲಸದ ನಿರ್ಲಕ್ಷ್ಯತೆಗಾಗಿ ಶಿಕ್ಷಿಸತಕ್ಕದ್ದಲ್ಲ; ಆದರೆ ಅಂಥ ಬಂದಿಯನ್ನು ಕೆಲಸದ ನಿರ್ಲಕ್ಷ್ಯತೆಯ ಸಂದರ್ಭಗಳಲ್ಲಿ ನಿಯಮಿಸಬಹುದಾದಂಥ ಆಹಾರ ಪ್ರಮಾಣದಲ್ಲಿ ವ್ಯತ್ಯಾಸಗಳ ಮೂಲಕ ಶಿಕ್ಷಿಸಬಹುದು.

## ಅಧ್ಯಾಯ – VIII
## ಬಂದಿಗಳ ಆರೋಗ್ಯ

**36. ರೋಗಗ್ರಸ್ಥ ಬಂದಿಗಳು:–** (1) ವೈದ್ಯಕೀಯ ಅಧಿಕಾರಿ ಅಥವಾ ಅಧೀನ ವೈದ್ಯಕೀಯ ಅಧಿಕಾರಿಯನ್ನು ನೋಡಲಿಚ್ಛಿಸುವ ಅಥವಾ ಮಾನಸಿಕವಾಗಿ ಅಥವಾ ದೈಹಿಕವಾಗಿ ಅಸ್ವಸ್ಥರಾಗಿ ಕಂಡುಬರುವ ಬಂದಿಗಳ ಹೆಸರುಗಳನ್ನು ವಿಳಂಬವಿಲ್ಲದೆ ಅಂಥ ಬಂದಿಗಳ ನೇರ ಪ್ರಭಾರವನ್ನು ಹೊಂದಿರುವ ಅಧಿಕಾರಿಯು ಜೈಲರನಿಗೆ ವರದಿ ಮಾಡತಕ್ಕದ್ದು.

(2) ಜೈಲರನು, ಅವನನ್ನು ನೋಡಲು ಇಚ್ಛಿಸುವ ಅಥವಾ ಕಾಯಿಲೆಯಾಗಿರುವ ಅಥವಾ ಯಾರ ಮಾನಸಿಕ ಅಥವಾ ದೈಹಿಕ ಸ್ಥಿತಿಯು ಗಮನವನ್ನು ಅಗತ್ಯಪಡಿಸುವುದಾಗಿ ಕಂಡುಬರುವ ಯಾವನೇ ಬಂದಿಯ ಬಗ್ಗೆ ವೈದ್ಯಕೀಯ ಅಧಿಕಾರಿ ಅಥವಾ ಅಧೀನ ವೈದ್ಯಕೀಯ ಅಧಿಕಾರಿಯ ಗಮನವನ್ನು ವಿಳಂಬವಿಲ್ಲದೆ ಸೆಳೆಯತಕ್ಕದ್ದು ಮತ್ತು ಯಾವನೇ ಅಂಥ ಬಂದಿಯ ಶಿಸ್ತು ಅಥವಾ ಉಪಚಾರದ ವ್ಯತ್ಯಾಸಗಳಿಗೆ ಸಂಬಂಧಿಸಿದಂತೆ ಬರಹದಲ್ಲಿ ಆ ವೈದ್ಯಕೀಯ ಅಧಿಕಾರಿಯು ಅಥವಾ ಅಧೀನ ವೈದ್ಯಕೀಯ ಅಧಿಕಾರಿಯು ಕೊಟ್ಟಿರುವ ಎಲ್ಲಾ ನಿರ್ದೇಶನಗಳನ್ನೂ ಜಾರಿಗೊಳಿಸತಕ್ಕದ್ದು.

**37. ವೈದ್ಯಕೀಯ ಅಧಿಕಾರಿಗಳ ನಿರ್ದೇಶನಗಳ ದಾಖಲೆ:–** ವೈದ್ಯಕೀಯ ಅಧಿಕಾರಿಯು ಅಥವಾ ಅಧೀನ ವೈದ್ಯಕೀಯ ಅಧಿಕಾರಿಯು ಯಾವನೇ ಬಂದಿಗೆ ಸಂಬಂಧಿಸಿದಂತೆ ಕೊಟ್ಟಿರುವ ಎಲ್ಲಾ ನಿರ್ದೇಶನಗಳನ್ನು, ಔಷಧಿಗಳ ಸರಬರಾಜಿಗಾಗಿನ ಆದೇಶಗಳು ಅಥವಾ ಆ ವೈದ್ಯಕೀಯ ಅಧಿಕಾರಿಯು ಖುದ್ದಾಗಿ ಅಥವಾ ಅವನ ಅಧೀಕ್ಷಣೆಯಲ್ಲಿ ಜಾರಿಗೊಳಿಸಿರುವಂಥ ಇತರ ವಿಷಯಗಳಿಗೆ

ಸಂಬಂಧಪಟ್ಟ ನಿರ್ದೇಶನಗಳನ್ನು ಹೊರತುಪಡಿಸಿ, ಆ ಬಂದಿಯ ಇತಿವೃತ್ತದಲ್ಲಿ ಅಥವಾ ನಿಯಮಿಸಬಹುದಾದಂಥ ಇತರ ದಾಖಲೆಗಳಲ್ಲಿ ದಿನದಿಂದ ದಿನಕ್ಕೆ ನಮೂದಿಸತಕ್ಕದ್ದು ಮತ್ತು ಜೈಲರನು ಪ್ರತಿಯೊಂದು ನಿರ್ದೇಶನಕ್ಕೆ ಸಂಬಂಧಿಸಿದಂತೆ, ಜೈಲರನು ಮಾಡಲು ಸೂಕ್ತವೆಂದು ಯೋಚಿಸುವಂಥ ಅಭಿಪ್ರಾಯೋಕ್ತಿಗಳು ಯಾವುವಾದರೂ ಇದ್ದರೆ ಅವುಗಳು ಮತ್ತು ನಮೂದಿನ ದಿನಾಂಕದೊಂದಿಗೆ, ಅದನ್ನು ಪಾಲಿಸಲಾಗಿರುವ ಅಥವಾ ಪಾಲಿಸಿಲ್ಲದಿರುವ ಸಂಗತಿಯನ್ನು ನಿರೂಪಿಸಿ ಅದರ ಸರಿಯಾದ ಸ್ಥಳದಲ್ಲಿ ನಮೂದನ್ನು ಮಾಡತಕ್ಕದ್ದು.

**38. ಆಸ್ಪತ್ರೆ:-** ಪ್ರತಿಯೊಂದು ಬಂದೀಖಾನೆಯಲ್ಲಿ ಒಂದು ಆಸ್ಪತ್ರೆಯನ್ನು ಅಥವಾ ರೋಗಗ್ರಸ್ಥ ಬಂದಿಗಳ ಸ್ವೀಕಾರಕ್ಕಾಗಿ ಸರಿಯಾದ ಸ್ಥಳವನ್ನು ಒದಗಿಸತಕ್ಕದ್ದು.

**39. ವಿಶೇಷ ಚಿಕಿತ್ಸೆಗಾಗಿ ಆಸ್ಪತ್ರೆಗೆ ಅಥವಾ ರಕ್ಷಣಾಲಯಕ್ಕೆ ಬಂದಿಯನ್ನು ಕಳುಹಿಸಲು ಸೂಪರಿಂಟೆಂಡೆಂಟನ ಅಧಿಕಾರ:-** (1) ಸೂಪರಿಂಟೆಂಡೆಂಟನು ಅವನ ಅಭಿಪ್ರಾಯದಲ್ಲಿ ಬಂದಿಗೆ, ಬಂದೀಖಾನೆಯ ಹೊರಗಿರುವ ಒಂದು ಆಸ್ಪತ್ರೆಯಲ್ಲಿ ಅಥವಾ ಭಾರತ ಮನೋವಿಕಲತೆ ಅಧಿನಿಯಮ, 1912 (ಕೇಂದ್ರ ಅಧಿನಿಯಮ 1912 ರ IV) ಇದರಲ್ಲಿ ಪರಿಭಾಷಿಸಿದಂತೆ ಮಾನಸಿಕ ರೋಗಿಗಳ ಆಸ್ಪತ್ರೆಯಲ್ಲಿ ಅಥವಾ ರಕ್ಷಣಾಲಯದಲ್ಲಿ ವಿಶೇಷ ಚಿಕಿತ್ಸೆಯು ಅಗತ್ಯವಾಗಿದ್ದರೆ, ಅಂಥ ಆಸ್ಪತ್ರೆ ಅಥವಾ ರಕ್ಷಣಾಲಯಕ್ಕೆ ಆ ಬಂದಿಯ ಯಾವನೇ ಸಂಬಂಧಿ ಅಥವಾ ಸ್ನೇಹಿತನು ರಾಜ್ಯ ಸರ್ಕಾರವು ನಿಯಮ ಅಥವಾ ಆದೇಶದ ಮೂಲಕ ನಿಯಮಿಸಬಹುದಾದಂಥ ಬಂಧಪತ್ರವನ್ನು ಬರೆದುಕೊಡುವ ಅಥವಾ ಅಂಥ ಷರತ್ತುಗಳು ಯಾವುವಾದರೂ ಇದ್ದರೆ ಅವುಗಳನ್ನು ಅನುವರ್ತಿಸುವುದಕ್ಕೆ ಒಳಪಟ್ಟು, ಅವನನ್ನು ಕಳುಹಿಸಬಹುದು. ಅಂಥ ಆಸ್ಪತ್ರೆ ಅಥವಾ ರಕ್ಷಣಾಲಯದಲ್ಲಿ ಆ ಬಂದಿಯು ಚಿಕಿತ್ಸೆಯನ್ನು ಪಡೆಯುತ್ತಿರುವಂಥ ಅಥವಾ ಅಲ್ಲಿಗೆ ಹೋಗುವುದರಲ್ಲಿ ಅಥವಾ ಅಲ್ಲಿಂದ ವಾಪಸ್ಸು ಬರುವಲ್ಲಿ ಅವನು ಉಪಯೋಗಿಸಿಕೊಂಡ ಯಾವುದೇ ಅವಧಿಯನ್ನು, ಅವನನ್ನು ಬಂದೀಖಾನೆಯಲ್ಲಿ ತಡೆಹಿಡಿದಿಟ್ಟ ಅವಧಿಯ ಭಾಗವಾಗಿರುವುದಾಗಿ ಭಾವಿಸತಕ್ಕದ್ದು.

**ವಿವರಣೆ 1:-** ಈ ಪ್ರಕರಣದಲ್ಲಿ ಇರುವುದು ಯಾವುದನ್ನು ಯಾವ ಪ್ರಕರಣದಲ್ಲಿ [1][ಕರ್ನಾಟಕ][1] ಬಂದಿಗಳ ಅಧಿನಿಯಮ, 1962ರ 11ನೇ ಪ್ರಕರಣವು ಅನ್ವಯವಾಗುವುದೋ ಆ ಪ್ರಕರಣಗಳಲ್ಲಿ ಆ ಪ್ರಕರಣದ ಪ್ರವರ್ತನೆಗೆ ಬಾಧಕವನ್ನುಂಟು ಮಾಡುವುದೆಂದು ಭಾವಿಸತಕ್ಕದ್ದಲ್ಲ.

**ವಿವರಣೆ 2:-** ಈ ಪ್ರಕರಣದಲ್ಲಿ "ಬಂದಿ" ಎಂದರೆ ನಿರ್ಣೀತ ಅಪರಾಧಿಯಾದ ಆಪರಾಧಿಕ ಬಂದಿ.

(2) (1)ನೇ ಉಪಪ್ರಕರಣದ ಮೇರೆಗೆ ವ್ಯವಹರಿಸಲಾದ ಯಾವನೇ ಬಂದಿಯು ಯಾವುದಕ್ಕೆ ಅವನನ್ನು ಕಳುಹಿಸಲಾಗಿದೆಯೋ ಆ ಆಸ್ಪತ್ರೆ ಅಥವಾ ರಕ್ಷಣಾಲಯದಿಂದ ಅಥವಾ ಅಲ್ಲಿಗೆ ಹೋಗುವಾಗ ಅಥವಾ ಅಲ್ಲಿಂದ ಹಿಂದಿರುಗಿ ಬರುವಾಗ ತಪ್ಪಿಸಿಕೊಂಡರೆ ಅಥವಾ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೆ ಅವನು ಎರಡು ವರ್ಷಗಳಿಗೆ ವಿಸ್ತರಿಸಬಹುದಾದಂಥ ಅವಧಿಗಾಗಿನ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರೆಡರಿಂದಲೂ ದಂಡಿತನಾಗತಕ್ಕದ್ದು; ಮತ್ತು ಅಂಥ ದಂಡನೆಯು, ಯಾವ ಅಪರಾಧಕ್ಕಾಗಿ ಅವನನ್ನು ಈಗಾಗಲೇ ಅಪರಾಧಿಯೆಂದು ನಿರ್ಣಯಿಸಲಾಗಿದೆಯೋ ಆ ಅಪರಾಧಕ್ಕಾಗಿ ಆ ಬಂದಿಯು ಗುರಿಯಾಗಿದ್ದಂಥ ದಂಡನೆಯ ಜೊತೆಗೆ ಇರತಕ್ಕದ್ದು.

(3) ದಂಡ ಪ್ರಕ್ರಿಯಾ ಸಂಹಿತೆ, 1898 ನೆಯ ಅಧ್ಯಾಯ - XLII ದ ಉಪಬಂಧಗಳು ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ, (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಬಂಧಪತ್ರಗಳಿಗೆ ಅನ್ವಯವಾಗತಕ್ಕದ್ದು.

## ಅಧ್ಯಾಯ - IX

## ಬಂದಿಗಳ ಸಂದರ್ಶಕರು

**40. ಸಿವಿಲ್ ಮತ್ತು ನಿರ್ಣೀತ ಅಪರಾಧಿಗಳಾದ ಆಪರಾಧಿಕ ಬಂದಿಗಳ ಸಂದರ್ಶಕರು:-** ಯಾವ ವ್ಯಕ್ತಿಗಳೊಂದಿಗೆ ಸಿವಿಲ್ ಅಥವಾ ನಿರ್ಣೀತ ಅಪರಾಧಿಗಳಾದ ಆಪರಾಧಿಕ ಬಂದಿಗಳು ಸಂಪರ್ಕಿಸಲು ಇಚ್ಛಿಸಬಹುದೋ ಆ ವ್ಯಕ್ತಿಗಳನ್ನು ಪ್ರತಿಯೊಂದು ಬಂದೀಖಾನೆ ಯೊಳಕ್ಕೆ ಸೂಕ್ತ ಕಾಲಗಳಲ್ಲಿ ಮತ್ತು ಸೂಕ್ತ ಪರಿಬಂಧಗಳಿಗೊಳಪಟ್ಟು, ಪ್ರವೇಶಿಸುವುದಕ್ಕಾಗಿ ಯುಕ್ತ ವ್ಯವಸ್ಥೆಯನ್ನು ಮಾಡತಕ್ಕದ್ದು; ನ್ಯಾಯೋದ್ದೇಶಕ್ಕೆ ಸಂಗತವಾಗಿರಬಹುದಾದಷ್ಟರ ಮಟ್ಟಿಗೆ ಅವನ ಅಪರಾಧ ನಿರ್ಣಯದ ವಿರುದ್ಧ ಅಪೀಲು ಅಥವಾ ಅರ್ಜಿಯನ್ನು ಸಲ್ಲಿಸಲು ಉದ್ದೇಶಿಸುವ ಸಿವಿಲ್ ಬಂದಿಗಳು ಅಥವಾ ಅಧಿವಿಚಾರಣೆಯಲ್ಲಿರುವ ಬಂದಿಗಳು ಯಾವನೇ ಇತರ ವ್ಯಕ್ತಿಯು ಹಾಜರಿಲ್ಲದೆ ಅವರ ಅರ್ಹತೆ ಪಡೆದ ಕಾನೂನು ಸಲಹೆಗಾರನನ್ನು ಮಾತ್ರ ಭೇಟಿ ಮಾಡುವಂತೆ ಎಚ್ಚರಿಕೆಯನ್ನು ವಹಿಸಬೇಕು.

**41. ಸಂದರ್ಶಕರ ಶೋಧನೆ:-** (1) ಜೈಲರನು ಬಂದಿಯ ಯಾವನೇ ಸಂದರ್ಶಕನ ಹೆಸರು ಮತ್ತು ವಿಳಾಸವನ್ನು ಕೇಳಬಹುದು ಮತ್ತು ಜೈಲರನು ಸಂದೇಹಪಡಲು ಯಾವುದೇ ಕಾರಣವಿರುವಾಗ ಅವನು ಯಾವನೇ ಸಂದರ್ಶಕನನ್ನು ಶೋಧಿಸಬಹುದು ಅಥವಾ ಅವನನ್ನು ಶೋಧಿಸುವಂತೆ ಮಾಡಬಹುದು; ಆದರೆ, ಆ ಶೋಧನೆಯನ್ನು ಯಾವನೇ ಬಂದಿ ಅಥವಾ ಮತ್ತೊಬ್ಬ ಸಂದರ್ಶಕನ ಸಮಕ್ಷಮದಲ್ಲಿ ಮಾಡತಕ್ಕದ್ದಲ್ಲ.

(2) ಯಾವನೇ ಅಂಥ ಸಂದರ್ಶಕನು, ಅವನನ್ನು ಶೋಧಿಸಿಕೊಳ್ಳುವುದಕ್ಕೆ ಅನುಮತಿಸಲು ನಿರಾಕರಿಸಿದ ಸಂದರ್ಭದಲ್ಲಿ ಜೈಲರನು ಅವನಿಗೆ ಪ್ರವೇಶವನ್ನು ನಿರಾಕರಿಸಬಹುದು ಮತ್ತು ಅಂಥ ವ್ಯವಹರಣೆಗಾಗಿನ ಕಾರಣಗಳನ್ನು ಅದರ ವಿವರಗಳೊಂದಿಗೆ, ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ದಾಖಲೆಯಲ್ಲಿ ನಮೂದು ಮಾಡತಕ್ಕದ್ದು.

## ಅಧ್ಯಾಯ - X

## ಬಂದೀಖಾನೆಗಳಿಗೆ ಸಂಬಂಧಪಟ್ಟ ಅಪರಾಧಗಳು

**42. ಬಂದೀಖಾನೆಗಳೊಳಕ್ಕೆ ನಿಷೇಧಿತ ವಸ್ತುಗಳನ್ನು ತರುವುದಕ್ಕಾಗಿ ಅಥವಾ ಅವುಗಳಿಂದ ಅವುಗಳನ್ನು ಸ್ಥಳಾಂತರಿಸುವುದಕ್ಕಾಗಿ ದಂಡನೆ ಮತ್ತು ಬಂದಿಗಳೊಡನೆ ಸಂಪರ್ಕ:-** ಯಾರೇ ಆಗಲಿ ಈ ಅಧಿನಿಯಮದ ಮೇರೆಗಿನ ಯಾವುದೇ ನಿಯಮಕ್ಕೆ ತದ್ವಿರುದ್ಧವಾಗಿ ಯಾವುದೇ ಬಂದೀಖಾನೆಯೊಳಕ್ಕೆ ಯಾವುದೇ ನಿಷೇಧಿತ ವಸ್ತುವನ್ನು ತಂದರೆ ಅಥವಾ ಅದರಿಂದ ಅದನ್ನು

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಸ್ಥಳಾಂತರಿಸಿದರೆ ಅಥವಾ ಯಾವುದೇ ಆದ ಸಾಧನದ ಮೂಲಕ ಅದನ್ನು ತರಲು ಅಥವಾ ಸ್ಥಳಾಂತರಿಸಲು ಪ್ರಯತ್ನಿಸಿದರೆ ಅಥವಾ ಬಂದೀಖಾನೆಯ ಪರಿಮಿತಿಗಳ ಹೊರಗಡೆ ಯಾವನೇ ಬಂದಿಗೆ ಅದನ್ನು ಸರಬರಾಜು ಮಾಡಿದರೆ ಅಥವಾ ಸರಬರಾಜು ಮಾಡಲು ಪ್ರಯತ್ನಿಸಿದರೆ ಅವನು ಮತ್ತು ಯಾವುದೇ ಅಂಥ ನಿಯಮಕ್ಕೆ ತದ್ವಿರುದ್ಧವಾಗಿ ತಿಳಿದೂ ತಿಳಿದೂ ಯಾವುದೇ ಬಂದೀಖಾನೆಯೊಳಕ್ಕೆ ಯಾವುವೇ ಅಂಥ ವಸ್ತುಗಳನ್ನು ತರಲು ಅಥವಾ ಅಲ್ಲಿಂದ ಅವುಗಳನ್ನು ಸ್ಥಳಾಂತರಿಸಲು, ಯಾವನೇ ಬಂದಿಯು ಅವುಗಳನ್ನು ಹೊಂದಿರಲು ಅಥವಾ ಬಂದೀಖಾನೆಯ ಪರಿಮಿತಿಗಳ ಹೊರಗಡೆ ಯಾವನೇ ಬಂದಿಗೆ ಸರಬರಾಜು ಮಾಡುವುದಕ್ಕೆ ಅವಕಾಶ ಮಾಡಿಕೊಡುವ ಪ್ರತಿಯೊಬ್ಬ ಅಧಿಕಾರಿಯು,

ಮತ್ತು ಯಾವುವೇ ಅಂಥ ನಿಯಮಗಳಿಗೆ ತದ್ವಿರುದ್ಧವಾಗಿ ಯಾವನೇ ಬಂದಿಯೊಡನೆ ಸಂಪರ್ಕಿಸುವ ಅಥವಾ ಸಂಪರ್ಕಿಸಲು ಪ್ರಯತ್ನಿಸುವ ಯಾರೇ ಆಗಲಿ,

ಮತ್ತು ಈ ಪ್ರಕರಣದ ಮೂಲಕ ದಂಡನೀಯವಾದ ಯಾವುದೇ ಅಪರಾಧವನ್ನು ದುಷ್ಪ್ರೇರಣೆ ಮಾಡುವ ಯಾರೇ ಆಗಲಿ ಅಪರಾಧವು ನಿರ್ಣಯವಾದ ಮೇಲೆ, ಆರು ತಿಂಗಳುಗಳನ್ನು ಮೀರದ ಅವಧಿಗಾಗಿನ ಕಾರಾವಾಸದಿಂದ ಅಥವಾ ಇನ್ನೂರು ರೂಪಾಯಿಗಳನ್ನು ಮೀರದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತರಾಗತಕ್ಕದ್ದು.

**43. 42ನೇ ಪ್ರಕರಣದ ಮೇರೆಗಿನ ಅಪರಾಧಕ್ಕಾಗಿ ದಸ್ತಗಿರಿ ಮಾಡಲು ಅಧಿಕಾರ:-** ಯಾವನೇ ವ್ಯಕ್ತಿಯು ಬಂದೀಖಾನೆಯ ಅಧಿಕಾರಿಯ ಸಮಕ್ಷಮದಲ್ಲಿ 42ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅಪರಾಧವನ್ನು ಮಾಡಿದಾಗ ಮತ್ತು ಅಂಥ ಅಧಿಕಾರಿಯು ಕೇಳಿದ ಮೇಲೆ ಅವನ ಹೆಸರು ಮತ್ತು ವಾಸಸ್ಥಳವನ್ನು ಕೊಡಲು ನಿರಾಕರಿಸಿದಾಗ ಅಥವಾ ಅಂಥ ಅಧಿಕಾರಿಯು ಸುಳ್ಳೆಂದು ತಿಳಿದಿರುವ ಅಥವಾ ಹಾಗೆಂದು ನಂಬಲು ಕಾರಣವಿರುವ ಅವನ ಹೆಸರು ಅಥವಾ ವಾಸಸ್ಥಳವನ್ನು ಕೊಟ್ಟಿರುವಾಗ, ಅಂಥ ಅಧಿಕಾರಿಯು ಅವನನ್ನು ದಸ್ತಗಿರಿ ಮಾಡಬಹುದು ಮತ್ತು ಅನವಶ್ಯ ವಿಳಂಬವಿಲ್ಲದೆ ಅವನನ್ನು ಒಬ್ಬ ಪೊಲೀಸು ಅಧಿಕಾರಿಯ ಬಳಿಗೆ ಕರೆದುಕೊಂಡು ಹೋಗತಕ್ಕದ್ದು ಮತ್ತು ಆ ತರುವಾಯ, ಅಂಥ ಪೊಲೀಸ್ ಅಧಿಕಾರಿಯು ಆ ಅಪರಾಧವು ಅವನ ಸಮಕ್ಷಮದಲ್ಲಿ ಮಾಡಲಾಗಿದ್ದಿದ್ದರೆ ಹೇಗೋ ಹಾಗೆ ಮುಂದುವರಿಯತಕ್ಕದ್ದು.

**44. ದಂಡನೆಗಳ ಪ್ರಕಟಣೆ:-** ಸೂಪರಿಂಟೆಂಡೆಂಟನು 42ನೇ ಪ್ರಕರಣದ ಮೇರೆಗೆ ನಿಷೇಧಿಸಿದ ಕಾರ್ಯಗಳನ್ನು ಮತ್ತು ಅವುಗಳನ್ನು ಮಾಡುವುದರಿಂದ ಅನುಭವಿಸಿದ ದಂಡನೆಗಳನ್ನು ನಮೂದಿಸಿ, ಇಂಗ್ಲೀಷಿನಲ್ಲಿ ಮತ್ತು ಆ ಬಂದೀಖಾನೆಯು ಇರುವಂಥ ಸ್ಥಳದ ಭಾಷೆಗಳಲ್ಲಿ ನೋಟೀಸನ್ನು ಬಂದೀಖಾನೆಯ ಹೊರಗಡೆ ಎದ್ದು ಕಾಣುವ ಸ್ಥಳದಲ್ಲಿ ಅಂಟಿಸುವಂತೆ ಮಾಡತಕ್ಕದ್ದು.

## ಅಧ್ಯಾಯ - XI

## ಬಂದೀಖಾನೆ ಅಪರಾಧಗಳು

**45. ಬಂದೀಖಾನೆ ಅಪರಾಧ:-** ಬಂದಿಯು ಈ ಕೆಳಕಂಡ ಕಾರ್ಯಗಳನ್ನು ಮಾಡಿದಾಗ ಬಂದೀಖಾನೆ ಅಪರಾಧಗಳಾಗಿರುವುದಾಗಿ ಘೋಷಿಸಲಾಗಿದೆ:-

(1) ಬಂದೀಖಾನೆ ಅಪರಾಧವಾಗಿರುವುದಾಗಿ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ಘೋಷಿಸಲಾಗಿರತಕ್ಕ ಬಂದೀಖಾನೆಯ ಯಾವುದೇ ವಿನಿಯಮದ ಅಂಥ ಉದ್ದೇಶ ಪೂರ್ವಕ ಉಲ್ಲಂಘನೆ;

(2) ಯಾವುದೇ ಹಲ್ಲೆ ಅಥವಾ ಆಪರಾಧಿಕ ಬಲಪ್ರಯೋಗ;

(3) ಅಪಮಾನಗೊಳಿಸುವ ಅಥವಾ ಬೆದರಿಸುವ ಭಾಷೆಯ ಉಪಯೋಗ;

(4) ಅನೈತಿಕ ಅಥವಾ ಅಸಭ್ಯ ಅಥವಾ ಅವ್ಯವಸ್ಥಿತ ವರ್ತನೆ;

(5) ಉದ್ದೇಶಪೂರ್ವಕವಾಗಿ ಅವನು ದುಡಿಮೆ ಮಾಡಲು ಅಸಮರ್ಥಗೊಳಿಸಿ ಕೊಳ್ಳುವುದು;

(6) ಕೆಲಸ ಮಾಡಲು ಉದ್ಧಟತನದಿಂದ ನಿರಾಕರಿಸುವುದು;

(7) ಯುಕ್ತ ಅಧಿಕಾರವಿಲ್ಲದೆ ಬೇಡಿಗಳು, ಸಂಕೋಲೆಗಳು ಅಥವಾ ಕಂಬಿಗಳನ್ನು ಉಜ್ಜುವುದು, ಕತ್ತರಿಸುವುದು, ಬದಲಾಯಿಸುವುದು ಅಥವಾ ತೆಗೆದುಹಾಕುವುದು;

(8) ಕಠಿಣ ಕಾರಾವಾಸ ಶಿಕ್ಷೆಗೆ ಗುರಿಯಾಗಿರುವ ಯಾವನೇ ಬಂದಿಯು ಕೆಲಸ ಮಾಡುವಲ್ಲಿ ಉದ್ದೇಶಪೂರ್ವಕವಾಗಿ ಸೋಮಾರಿಯಾಗಿರುವುದು ಅಥವಾ ನಿರ್ಲಕ್ಷತೆಯಿಂದಿರುವುದು;

(9) ಕಠಿಣ ಕಾರಾವಾಸ ಶಿಕ್ಷೆಗೆ ಗುರಿಯಾಗಿರುವ ಯಾವನೇ ಬಂದಿಯಿಂದ ಕೆಲಸದ ಬಗ್ಗೆ ಉದ್ದೇಶಪೂರ್ವಕವಾದ ದುರ್ವ್ಯವಸ್ಥಾಪನೆ;

(10) ಬಂದೀಖಾನೆಯ ಸ್ವತ್ತಿಗೆ ಉದ್ದೇಶಪೂರ್ವಕವಾದ ಹಾನಿ;

(11) ಇತಿವೃತ್ತ, ದಾಖಲೆಗಳು ಅಥವಾ ದಸ್ತಾವೇಜುಗಳನ್ನು ಅಕ್ರಮವಾಗಿ ತಿದ್ದುವುದು ಅಥವಾ ಅವುಗಳನ್ನು ವಿರೂಪಗೊಳಿಸುವುದು;

(12) ಯಾವುವೇ ನಿಷೇಧಿತ ವಸ್ತುಗಳನ್ನು ಸ್ವೀಕರಿಸುವುದು, ವಶದಲ್ಲಿಟ್ಟುಕೊಳ್ಳುವುದು ಅಥವಾ ವರ್ಗಾಯಿಸುವುದು;

(13) ಅಸ್ವಸ್ಥತೆಯನ್ನು ನಟಿಸುವುದು;

(14) ಯಾವನೇ ಅಧಿಕಾರಿ ಅಥವಾ ಬಂದಿಯ ವಿರುದ್ಧ ಸುಳ್ಳು ಆಪಾದನೆಯನ್ನು ಉದ್ದೇಶಪೂರ್ವಕವಾಗಿ ಮಾಡುವುದು;

(15) ಯಾವುದೇ ಬೆಂಕಿ, ಯಾವುದೇ ಒಳಸಂಚು ಅಥವಾ ಪಿತೂರಿ, ಯಾವುದೇ ತಪ್ಪಿಸಿಕೊಳ್ಳುವಿಕೆ ಅಥವಾ ತಪ್ಪಿಸಿಕೊಳ್ಳಲು ಪ್ರಯತ್ನ ಅಥವಾ ಸಿದ್ಧತೆ ಮತ್ತು ಯಾವನೇ ಬಂದಿಯ ಮೇಲೆ ಅಥವಾ ಬಂದೀಖಾನೆಯ ಅಧಿಕಾರಿಯ ಮೇಲೆ ಯಾವುದೇ ಆಕ್ರಮಣ ಅಥವಾ ಆಕ್ರಮಣಕ್ಕಾಗಿ ಸಿದ್ಧತೆ ಇವುಗಳ ಸಂಭವಿಸುವಿಕೆಯನ್ನು ಅವನ ತಿಳಿವಳಿಕೆಗೆ ಬಂದ ಕೂಡಲೇ ಅದನ್ನು ವರದಿ ಮಾಡಲು ತಪ್ಪುವುದು ಅಥವಾ ನಿರಾಕರಿಸುವುದು; ಮತ್ತು

(16) ತಪ್ಪಿಸಿಕೊಳ್ಳಲು ಪಿತೂರಿ ಮಾಡುವುದು ಅಥವಾ ತಪ್ಪಿಸಿಕೊಳ್ಳುವುದಕ್ಕೆ ಸಹಾಯ ಮಾಡುವುದು ಅಥವಾ ಹಿಂದೆ ಹೇಳಿದ ಯಾವುದೇ ಇತರ ಅಪರಾಧವನ್ನು ಮಾಡಲು ಸಹಾಯ ಮಾಡುವುದು.

**46. 45ನೇ ಪ್ರಕರಣದ ಮೇರೆಗಿನ ಅಪರಾಧಗಳಿಗೆ ದಂಡನೆ:-** ಸೂಪರಿಂಟೆಂಡೆಂಟನು 45ನೇ ಪ್ರಕರಣದ ಮೇರೆಗೆ ಬಂದೀಖಾನೆ ಅಪರಾಧವಾಗಿರುವುದಾಗಿ ಘೋಷಿಸಲಾದ ಯಾವುದೇ ಅಪರಾಧದ ಬಗ್ಗೆ ಯಾವನೇ ವ್ಯಕ್ತಿಯನ್ನು ಪರೀಕ್ಷಿಸಬಹುದು ಮತ್ತು ಅದರ ಬಗ್ಗೆ ನಿರ್ಧರಿಸಬಹುದು ಮತ್ತು ಅಂಥ ಅಪರಾಧವನ್ನು,-

(1) ವಿಧ್ಯುಕ್ತ ಎಚ್ಚರಿಕೆ;

**ವಿವರಣೆ:-** ವಿಧ್ಯುಕ್ತ ಎಚ್ಚರಿಕೆಯು ಸೂಪರಿಂಟೆಂಡೆಂಟನು ಬಂದಿಗೆ ಖುದ್ದಾಗಿ ಕೊಟ್ಟ ಮತ್ತು ದಂಡನೆ ಪುಸ್ತಕ ಮತ್ತು ಬಂದಿಯ ಇತಿವೃತ್ತದಲ್ಲಿ ದಾಖಲು ಮಾಡಿದ ಎಚ್ಚರಿಕೆ ಎಂಬ ಅರ್ಥವನ್ನು ಹೊಂದಿರತಕ್ಕದ್ದು;

(2) ನಿಯಮಿಸಬಹುದಾದಂಥ ಅವಧಿಗಾಗಿ ದುಡಿಮೆಯನ್ನು ಯಾವುದೇ ಹೆಚ್ಚು ಆಯಾ ಸಕಾರಕ ಅಥವಾ ಕಠಿಣ ಸ್ವರೂಪವಾದುದಕ್ಕೆ ಬದಲಾಯಿಸುವುದು;

(3) ಕಠಿಣ ಕಾರಾವಾಸದ ಶಿಕ್ಷೆಗೆ ಗುರಿಪಡಿಸಿಲ್ಲದ ನಿರ್ಣೀತ ಅಪರಾಧಿಗಳಾದ ಆಪರಾಧಿಕ ಬಂದಿಗಳ ಸಂದರ್ಭದಲ್ಲಿ ಏಳು ದಿವಸಗಳನ್ನು ಮೀರದ ಅವಧಿಗಾಗಿನ ಕಠಿಣ ಶ್ರಮ;

(4) ನಿಯಮಿಸಬಹುದಾದಂತೆ ತತ್ಕಾಲದಲ್ಲಿ ಜಾರಿಯಲ್ಲಿರುವ ಕಡಿಮೆ ಮಾಡುವ ಅಥವಾ ಫರ್ಲೋ ಪದ್ಧತಿಯ ಮೇರೆಗೆ ಅಂಗೀಕಾರಾರ್ಹವಾದಂಥ ವಿಶೇಷಾಧಿಕಾರಗಳನ್ನು ಕಳೆದುಕೊಳ್ಳುವುದು;

(5) ಎರಡು ತಿಂಗಳುಗಳನ್ನು ಮೀರದ ಯಾವುದೇ ಅವಧಿಗಾಗಿ ಪ್ರತ್ಯೇಕವಾಗಿ ಬಂಧನದಲ್ಲಿಡುವುದು

- ಇವುಗಳಿಂದ ದಂಡಿಸಬಹುದು:

ಪರಂತು, ಪ್ರತ್ಯೇಕವಾಗಿ ಬಂಧಿಸಿಡುವ ದಂಡನೆಯನ್ನು ಜಾರಿ ಮಾಡುವಾಗ ಯಾವನೇ ಬಂದಿಯನ್ನು, ಒಂದು ಸಲಕ್ಕೆ ಹದಿನೈದು ದಿವಸಗಳಿಗಿಂತ ಹೆಚ್ಚಿಗೆಯಾಗಿ ನಿರಂತರವಾಗಿ ಪ್ರತ್ಯೇಕವಾಗಿ ಬಂಧನದಲ್ಲಿ ಇಡತಕ್ಕದ್ದಲ್ಲ ಮತ್ತು ಬಂಧನದ ಒಂದು ಅವಧಿ ಮತ್ತು ಮುಂದಿನ ದರ ನಡುವಣ ಮಧ್ಯಂತರವು ಕನಿಷ್ಠ ಪಕ್ಷ ಒಂದು ವಾರವಿರಬೇಕು.

**ವಿವರಣೆ:-** "ಪ್ರತ್ಯೇಕವಾಗಿ ಬಂಧನದಲ್ಲಿಡುವುದು" ಎಂದರೆ, ಬಂದಿಯು ಇತರ ಬಂದಿಗಳನ್ನು ಸಂಪರ್ಕಿಸುವುದನ್ನು ಸಂಪೂರ್ಣವಾಗಿ ಬೇರೆಯಾಗಿರಿಸುವಂತೆ ಆದರೆ ಅವರಿಗೆ ಕಾಣಿಸದೆ ಇರುವ ಹಾಗೆಲ್ಲ ದುಡಿಮೆಯ ಜೊತೆಗೆ ಅಥವಾ ಅದಿಲ್ಲದೆ ಅಂಥ ಬಂಧನದಲ್ಲಿಡುವುದು.

**47. 46ನೇ ಪ್ರಕರಣದ ಮೇರೆಗೆ ಬಹು ಬಗೆಯ ದಂಡನೆಗಳು:-** (1) ಈ ಕೆಳಕಂಡವುಗಳು ಯಾವುವು ಎಂದರೆ,-

(i) 46ನೇ ಪ್ರಕರಣದ (4)ನೇ ಖಂಡದ ಮೇರೆಗೆ ವಿಶೇಷ ಅಧಿಕಾರಗಳನ್ನು ಕಳೆದು ಕೊಳ್ಳುವುದನ್ನು ಹೊರತುಪಡಿಸಿ, ವಿಧ್ಯುಕ್ತ ಎಚ್ಚರಿಕೆ ಕೊಡುವುದನ್ನು ಯಾವುದೇ ಇತರ ದಂಡನೆಯೊಂದಿಗೆ ಕೂಡಿಸತಕ್ಕದ್ದಲ್ಲ;

(ii) ಯಾವುದಕ್ಕೆ ಬಂದಿಯು ಗುರಿಯಾಗಬೇಕಾಗತಕ್ಕದ್ದೋ ಆ ಏಕಾಂತವಾಗಿರುವ ಒಟ್ಟು ಅವಧಿಯನ್ನು ಹೆಚ್ಚಿಸುವ ಹಾಗೆ ಸಣ್ಣ ಕೋಣೆಯಲ್ಲಿನ ಬಂಧನವನ್ನು ಪ್ರತ್ಯೇಕವಾದ ಬಂಧನದೊಂದಿಗೆ ಕೂಡಿಸತಕ್ಕದ್ದಲ್ಲ

- ಈ ಅಪರಾಧಗಳಿಗೊಳಪಟ್ಟು 45ನೇ ಪ್ರಕರಣದ ಮೇರೆಗೆ ಬಂದೀಖಾನೆ ಅಪರಾಧಗಳಾಗಿರುವುದಾಗಿ ಘೋಷಿಸಲಾದ ಅಪರಾಧಗಳನ್ನು ಕೂಡಿಸುವುದಕ್ಕಾಗಿ 46ನೇ ಪ್ರಕರಣದಲ್ಲಿ ನಮೂದಿಸಲಾದ ಯಾವುವೇ ಎರಡು ದಂಡನೆಗಳನ್ನು ಕೊಡಬಹುದು.

(2) ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳನ್ನು ಉಲ್ಲಂಘಿಸಿ ಯಾವುದೇ ದಂಡನೆಯನ್ನು ಯಾವುದೇ ಇತರ ದಂಡನೆಯೊಂದಿಗೆ ಕೂಡಿಸತಕ್ಕದ್ದಲ್ಲ.

(3) ಯಾವುದೇ ಅಪರಾಧಕ್ಕಾಗಿ ಯಾವುದನ್ನು ಕೂಡಿಸಿ ಕೊಡಬಹುದಾಗಿಲ್ಲವೋ ಆ ಎರಡು ದಂಡನೆಗಳನ್ನು ಯಾವುದೇ ಇತರ ಅಂಥ ಅಪರಾಧಕ್ಕಾಗಿ ಕೊಟ್ಟ ದಂಡನೆಯೊಂದಿಗೆ ಕೂಡಿಸುವ ಹಾಗೆ 45ನೇ ಪ್ರಕರಣದ ಮೇರೆಗೆ ಅಪರಾಧಕ್ಕಾಗಿ ಯಾವುದೇ ದಂಡನೆಯನ್ನು ವಿಧಿಸತಕ್ಕದ್ದಲ್ಲ.

**48. 46ನೇ ಪ್ರಕರಣ ಮತ್ತು 47ನೇ ಪ್ರಕರಣದ ಮೇರೆಗೆ ದಂಡನೆಯನ್ನು ವಿಧಿಸುವುದು:-** (1) ಸೂಪರಿಂಟೆಂಡೆಂಟನು, ಒಂದು ತಿಂಗಳನ್ನು ಮೀರಿದ ಅವಧಿಗಾಗಿ ಪ್ರತ್ಯೇಕವಾಗಿ ಬಂಧನದಲ್ಲಿಡುವ ಪ್ರಕರಣದಲ್ಲಿ ಇನ್ಸ್‌ಪೆಕ್ಟರ್ ಜನರಲ್ಲನ ಪೂರ್ವ ಸ್ಥಿರೀಕರಣಕ್ಕೆ ಒಳಪಟ್ಟು, 46ನೇ ಪ್ರಕರಣ ಮತ್ತು 47ನೇ ಪ್ರಕರಣದಲ್ಲಿ ನಮೂದಿಸಿರುವ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(2) ಸೂಪರಿಂಟೆಂಡೆಂಟನಿಗೆ ಅಧೀನನಾದ ಯಾರೇ ಅಧಿಕಾರಿಯು ಯಾವುದೇ ವಿಧವಾದ ದಂಡನೆಯನ್ನು ವಿಧಿಸಲು ಅಧಿಕಾರವನ್ನು ಹೊಂದಿರತಕ್ಕದ್ದಲ್ಲ.

**49. ಶಿಕ್ಷೆಯ ಅಮಾನತ್ತಿನ ಷರತ್ತುಗಳ ಉಲ್ಲಂಘನೆಗಾಗಿ ದಂಡನೆ ಇತ್ಯಾದಿ:-** ಯಾವನೇ ಬಂದಿಯು ಯಾವ ಷರತ್ತುಗಳ ಮೇಲೆ ಅವನ ಶಿಕ್ಷೆಯನ್ನು ಅಮಾನತ್ತು ಗೊಳಿಸಲಾಯಿತೋ ಅಥವಾ ಕಡಿಮೆಗೊಳಿಸಲಾಯಿತೋ ಅಥವಾ ಅವನಿಗೆ ಫರ್ಲೋವನ್ನು ಕೊಡಲಾಯಿತೋ ಆ ಯಾವುದೇ ಷರತ್ತನ್ನು, ಸಾಕಷ್ಟು ಕಾರಣವಿಲ್ಲದೆ ಪಾಲಿಸಲು ತಪ್ಪಿದರೆ, ಅವನು ಬಂದೀಖಾನೆ ಅಪರಾಧವನ್ನು ಮಾಡಿರುವುದಾಗಿ ಭಾವಿಸತಕ್ಕದ್ದು ಮತ್ತು ಸೂಪರಿಂಟೆಂಡೆಂಟನು ಅವನ ಸಮಜಾಯಿಷಿಯನ್ನು ಪಡೆದುಕೊಂಡ ತರುವಾಯ ಅಂಥ ಅಪರಾಧವನ್ನು,-

(i) 46ನೇ ಪ್ರಕರಣದ (1)ನೇ ಖಂಡದಲ್ಲಿ ಉಪಬಂಧಿಸಿದಂತೆ ವಿಧ್ಯುಕ್ತ ಎಚ್ಚರಿಕೆ;

(ii) ಅಂಥ ಬಂದಿಯನ್ನು ಬಂದೀಖಾನೆಯ ಅಧಿಕಾರಿಯನ್ನಾಗಿ ನೇಮಕ ಮಾಡಿದ್ದರೆ ದರ್ಜೆಯಲ್ಲಿ ಇಳಿಸುವುದು;

(iii) ಜೈಲಿನಲ್ಲಿ ಶಿಕ್ಷೆಯನ್ನು ಕಡಿಮೆ ಮಾಡುವ ಅಥವಾ ಫರ್ಲೋ ಪದ್ಧತಿಯ ಮೇರೆಗೆ ಅಂಗೀಕಾರಾರ್ಹವಾದ ವಿಶೇಷಾಧಿಕಾರಗಳನ್ನು ಕಳೆದುಕೊಳ್ಳುವುದು; ಅಥವಾ

(iv) ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದೇಶಿಸಬಹುದಾದಂತೆ ಅಂಥ ವಿಶೇಷಾಧಿಕಾರಗಳನ್ನು ಕಳೆದುಕೊಳ್ಳುವುದು

- ಇವುಗಳ ಮೂಲಕ ದಂಡಿಸುವುದು.

**50. ಸಕ್ಷಮ ನ್ಯಾಯಾಲಯದ ಆದೇಶದ ಮೂಲಕವಾಗಿ ಅಲ್ಲದೆ ಹಿಂದೆ ಹೇಳಿದುದಕ್ಕೆ ಅನುಸಾರವಾಗಿ ದಂಡನೆಯು ಇರತಕ್ಕದ್ದು:-** ಸಕ್ಷಮ ನ್ಯಾಯಾಲಯದ ಆದೇಶದ ಮೂಲಕವಾಗಿ ಅಲ್ಲದೆ 46ನೇ ಪ್ರಕರಣ, 47ನೇ ಪ್ರಕರಣ, 48ನೇ ಪ್ರಕರಣ ಅಥವಾ 49ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ದಂಡನೆಯನ್ನು ಹೊರತುಪಡಿಸಿ ಇತರ ಯಾವುದೇ ದಂಡನೆಯನ್ನು ಯಾವನೇ ಬಂದಿಗೆ ವಿಧಿಸತಕ್ಕದ್ದಲ್ಲ ಮತ್ತು ಯಾವುದೇ ದಂಡನೆಯನ್ನು ಆ ಪ್ರಕರಣಗಳ ಉಪಬಂಧಗಳಿಗೆ ಅನುಸಾರವಾಗಿ ಅಲ್ಲದೆ ಅನ್ಯಥಾ ಯಾವನೇ ಬಂದಿಗೆ ವಿಧಿಸತಕ್ಕದ್ದಲ್ಲ.

**51. ದಂಡನೆಗಾಗಿ ಬಂದಿಯ ಸೂಕ್ತತೆಯ ಬಗ್ಗೆ ವೈದ್ಯಕೀಯ ಅಧಿಕಾರಿಯು ಪ್ರಮಾಣೀಕರಿಸತಕ್ಕದ್ದು:-** (1) 46ನೇ ಪ್ರಕರಣದ (2)ನೇ ಖಂಡದ ಮೇರೆಗೆ ದುಡಿಮೆಯ ಬದಲಾವಣೆಯ ಯಾವುದೇ ದಂಡನೆಯನ್ನು, ಅಂಥ ದಂಡನೆಯನ್ನು ವಿಧಿಸಲಾಗಿರುವ ಬಂದಿಯನ್ನು ವೈದ್ಯಕೀಯ ಅಧಿಕಾರಿಯು ಪರೀಕ್ಷಿಸಿರುವವರೆಗೆ, ಜಾರಿಗೊಳಿಸತಕ್ಕದ್ದಲ್ಲ, ಆ ಬಂದಿಯು ಆ ದಂಡನೆಯನ್ನು ಅನುಭವಿಸಲು ಸೂಕ್ತನಿರುವನೆಂದು ಪರ್ಯಾಲೋಚಿಸಿದರೆ, ಅವನು 11ನೇ ಪ್ರಕರಣದಲ್ಲಿ ನಿಯಮಿಸಲಾದ ದಂಡನೆ ಪುಸ್ತಕದ ಸಮುಚಿತ ಅಂಕಣದಲ್ಲಿ ತದನುಸಾರವಾಗಿ ಪ್ರಮಾಣೀಕರಿಸತಕ್ಕದ್ದು.

(2) ಆ ಬಂದಿಯು ಆ ದಂಡನೆಯನ್ನು ಅನುಭವಿಸಲು ಸೂಕ್ತನಾಗಿಲ್ಲವೆಂದು ಅವನು ಪರ್ಯಾಲೋಚಿಸಿದರೆ, ಅವನು ಅಂಥದೇ ರೀತಿಯಲ್ಲಿ ಬರಹದಲ್ಲಿ ಅವನ ಅಭಿಪ್ರಾಯವನ್ನು ದಾಖಲು ಮಾಡತಕ್ಕದ್ದು ಮತ್ತು ವಿಧಿಸಲಾಗಿರುವಂಥ ಬಗೆಯ ದಂಡನೆಗಾಗಿ ಆ ಬಂದಿಯು ಸಂಪೂರ್ಣವಾಗಿ ಸೂಕ್ತನಾಗಿಲ್ಲವೋ ಹೇಗೆ ಅಥವಾ ಯಾವುದೇ ಮಾರ್ಪಾಟನ್ನು ಅವಶ್ಯವೆಂದು ಅವನು ಪರ್ಯಾಲೋಚಿಸುವನೋ ಹೇಗೆ ಎಂಬುದನ್ನು ನಿರೂಪಿಸತಕ್ಕದ್ದು.

(3) ಅವನು ಯಾವುದೇ ಮಾರ್ಪಾಟನ್ನು ಅವಶ್ಯವೆಂದು ಪರ್ಯಾಲೋಚಿಸಿದರೆ, ಅವನು, ಆ ಬಂದಿಯು ಅವನ ಆರೋಗ್ಯಕ್ಕೆ ಹಾನಿಯಾಗದಂತೆ ಬಂದಿಯು ಎಷ್ಟರ ಮಟ್ಟಿಗೆ ದಂಡನೆಯನ್ನು ಅನುಭವಿಸಬಲ್ಲನು ಎಂದು ಅವನು ಯೋಚಿಸುವನೋ ಅದನ್ನು ನಿರೂಪಿಸತಕ್ಕದ್ದು.

**52. ದಂಡನೆ ಪುಸ್ತಕಗಳಲ್ಲಿನ ನಮೂದುಗಳು:-** (1) 11ನೇ ಪ್ರಕರಣದಲ್ಲಿ ನಿಯಮಿಸಲಾದ ದಂಡನೆ ಪುಸ್ತಕದಲ್ಲಿ ವಿಧಿಸಲಾದ ಪ್ರತಿಯೊಂದು ದಂಡನೆಗೆ ಸಂಬಂಧಿಸಿದಂತೆ ಬಂದಿಯ ಹೆಸರು, ನೋಂದಣಿ ಸಂಖ್ಯೆ ಮತ್ತು ಅವನು ಸೇರಿದಂಥ ವರ್ಗ (ರೂಢಿಗತನಾದವನೋ ಅಥವಾ ಅಲ್ಲವೋ), ಅವನು ತಪ್ಪಿತಸ್ಥನಾಗಿದ್ದಂಥ ಬಂದೀಖಾನೆ ಅಪರಾಧ, ಅಂಥ ಬಂದೀಖಾನೆ ಅಪರಾಧವನ್ನು ಮಾಡಿದಂಥ ದಿನಾಂಕ, ಆ ಬಂದಿಯ ವಿರುದ್ಧ ದಾಖಲು ಮಾಡಲಾದ ಹಿಂದಿನ ಬಂದೀಖಾನೆ, ಅಪರಾಧಗಳ ಸಂಖ್ಯೆ ಮತ್ತು ಅವನ ಕೊನೆಯ ಬಂದೀಖಾನೆ ಅಪರಾಧದ ದಿನಾಂಕ ವಿಧಿಸಲಾದ ದಂಡನೆ ಮತ್ತು ವಿಧಿಸಿದ ದಿನಾಂಕ

- ಇವುಗಳನ್ನು ದಾಖಲು ಮಾಡತಕ್ಕದ್ದು.

(2) ಗಂಭೀರ ಸ್ವರೂಪದ ಪ್ರತಿಯೊಂದು ಬಂದೀಖಾನೆ ಅಪರಾಧದ ಪ್ರಕರಣದಲ್ಲಿ ಆ ಅಪರಾಧವನ್ನು ರುಜುವಾತುಪಡಿಸುವ ಸಾಕ್ಷಿದಾರರ ಹೆಸರುಗಳನ್ನು ದಾಖಲು ಮಾಡತಕ್ಕದ್ದು.

(3) ಪ್ರತಿಯೊಂದು ದಂಡನೆಗೆ ಸಂಬಂಧಪಟ್ಟ ನಮೂದುಗಳ ಎದುರಿಗೆ ಜೈಲರನು ಮತ್ತು ಸೂಪರಿಂಟೆಂಡೆಂಟನು ಆ ನಮೂದುಗಳ ಸರಿತನದ ಸಾಕ್ಷ್ಯವೆಂದು ಅವರ ಚಿಕ್ಕ ರುಜುವನ್ನು ಹಾಕತಕ್ಕದ್ದು.

**53. ಹೇಯ ಅಪರಾಧವನ್ನು ಮಾಡಿದ ತರುವಾಯ ಪ್ರಕ್ರಿಯೆ:-** ಯಾವನೇ ಬಂದಿಯು ಯಾವುದು ಅಂಥ ಅಪರಾಧಗಳನ್ನು ಮೇಲಿಂದ ಮೇಲೆ ಅವನು ಮಾಡಿರುವ ಕಾರಣದಿಂದಾಗಿ ಅಥವಾ ಅನ್ಯಥಾ ಸೂಪರಿಂಟೆಂಡೆಂಟನ ಅಭಿಪ್ರಾಯದಲ್ಲಿ ಈ ಅಧಿನಿಯಮದ ಮೇರೆಗೆ ವಿಧಿಸಲು ಅವನು ಅಧಿಕಾರವನ್ನು ಹೊಂದಿರುವಂಥ ಯಾವುದೇ ದಂಡನೆಯನ್ನು ವಿಧಿಸುವುದರಿಂದತಕ್ಕುದಾಗಿ ದಂಡನೀಯವಾಗುವುದಿಲ್ಲವೋ, ಯಾವುದೇ ಬಂದಿಖಾನೆಯ ಶಿಸ್ತಿನ ವಿರುದ್ಧ ಆ ಯಾವುದೇ ಅಪರಾಧದ ಬಗ್ಗೆ ಯಾವನೇ ಬಂದಿಯು ತಪ್ಪಿತಸ್ಥನಾಗಿದ್ದರೆ ಆ ಸೂಪರಿಂಟೆಂಡೆಂಟನು ಅಂಥ ಬಂದಿಯನ್ನು ಆ ಸಂದರ್ಭ ನಿರೂಪಣೆಯೊಂದಿಗೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮೊದಲನೇ ದರ್ಜೆಯ ಯಾವನೇ ಮ್ಯಾಜಿಸ್ಟ್ರೇಟನ ಬಳಿ ಕಳುಹಿಸಬಹುದು ಮತ್ತು ಆ ತರುವಾಯ ಅಂಥ ಮ್ಯಾಜಿಸ್ಟ್ರೇಟನು ಆ ಬಂದಿಯ ವಿರುದ್ಧ ಹಾಗೆ ತರಲಾದ ಆಪಾದನೆಯ ಬಗ್ಗೆ ವಿಚಾರಣೆ ಮಾಡತಕ್ಕದ್ದು ಮತ್ತು ಅದನ್ನು ಅಧಿವಿಚಾರಿಸತಕ್ಕದ್ದು ಮತ್ತು ಅಪರಾಧವು ನಿರ್ಣಯವಾದ ಮೇಲೆ ಅವನಿಗೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದಂಥ ಕಾರಾವಾಸದ ಶಿಕ್ಷೆಯನ್ನು ವಿಧಿಸಬಹುದು ಅಂಥ ಅವಧಿಯು ಅಂಥ ಬಂದಿಯು ಅಂಥ ಅಪರಾಧವನ್ನು ಅವನು ಮಾಡಿದಾಗ ಕಾರಾವಾಸವನ್ನು ಅನುಭವಿಸುತ್ತಿದ್ದಂಥ ಯಾವುದೇ ಅವಧಿಯ ಜೊತೆಗೆ ಇರತಕ್ಕದ್ದು; ಅಥವಾ ಅವನು 46ನೇ ಪ್ರಕರಣದ ಮೇರೆಗೆ ಗುರಿಯಾಗಬಹುದಾದಂಥ ಯಾವುದೇ ದಂಡನೆಗೆ ಅವನನ್ನು ಗುರಿಪಡಿಸಬಹುದು:

ಪರಂತು, ಯಾವನೇ ವ್ಯಕ್ತಿಯನ್ನು ಒಂದೇ ಅಪರಾಧಕ್ಕಾಗಿ ಎರಡು ಸಲ ದಂಡಿಸತಕ್ಕದ್ದಲ್ಲ.

**54. ಬಂದೀಖಾನೆಯ ಅಧೀನ ಅಧಿಕಾರಿಗಳಿಂದ ಅಪರಾಧಗಳು:-** (1) (ಎ) ಕರ್ತವ್ಯದ ಯಾವುದೇ ಉಲ್ಲಂಘನೆ ಅಥವಾ ಯಾವುದೇ ನಿಯಮ ಅಥವಾ ವಿನಿಯಮ ಅಥವಾ ಸಕ್ಷಮ ಪ್ರಾಧಿಕಾರವು ಮಾಡಿದ ಕಾನೂನು ಸಮ್ಮತ ಆದೇಶದ ಉದ್ದೇಶ ಪೂರ್ವಕ ಉಲ್ಲಂಘನೆ ಅಥವಾ ಅದನ್ನು ನಿರ್ಲಕ್ಷಿಸಿದ ಬಗ್ಗೆ ತಪ್ಪಿತಸ್ಥನಾಗತಕ್ಕ; ಅಥವಾ

(ಬಿ) ಅನುಮತಿ ಇಲ್ಲದೆ ಅಥವಾ ಅವನ ಉದ್ದೇಶದ ಬಗ್ಗೆ ಎರಡು ತಿಂಗಳುಗಳ ಅವಧಿಗಾಗಿ ಬರಹದಲ್ಲಿ ಮುಂಚಿತವಾಗಿ ನೋಟೀಸನ್ನು ಕೊಟ್ಟಿಲ್ಲದೆ ಅವನ ಹುದ್ದೆಯ ಕರ್ತವ್ಯಗಳಿಂದ ವಿಮುಖನಾಗತಕ್ಕ; ಅಥವಾ

(ಸಿ) ಅವನಿಗೆ ಮಂಜೂರು ಮಾಡಿದ ಯಾವುದೇ ರಜೆಯನ್ನು ಮೀರಿ ಉದ್ದೇಶ ಪೂರ್ವಕವಾಗಿ ಉಳಿಯತಕ್ಕ; ಅಥವಾ

(ಡಿ) ಬಂದೀಖಾನೆಯ ಅವನ ಕರ್ತವ್ಯಗಳನ್ನು ಹೊರತುಪಡಿಸಿ ಯಾವುದೇ ನಿಯೋಜನೆಯಲ್ಲಿ ಅಧಿಕಾರವಿಲ್ಲದೆ ತೊಡಗತಕ್ಕ; ಅಥವಾ

(ಇ) ಹೇಡಿತನದ ಬಗ್ಗೆ ತಪ್ಪಿತಸ್ಥನಾಗತಕ್ಕ

- ಪ್ರತಿಯೊಬ್ಬ ಜೈಲರನು ಅಥವಾ ಅವನಿಗೆ ಅಧೀನನಾಗಿರುವ ಬಂದೀಖಾನೆಯ ಅಧಿಕಾರಿಯು, ಅಪರಾಧವು ನಿರ್ಣಯವಾದ ಮೇಲೆ, ಎರಡು ನೂರು ರೂಪಾಯಿಗಳನ್ನು ಮೀರದ ಜುಲ್ಮಾನೆಯಿಂದ ಅಥವಾ ಮೂರು ತಿಂಗಳುಗಳನ್ನು ಮೀರದ ಅವಧಿಗಾಗಿನ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಯಾವನೇ ವ್ಯಕ್ತಿಯನ್ನು ಒಂದೇ ಅಪರಾಧದ ಬಗ್ಗೆ ಎರಡು ಸಲ ದಂಡಿಸತಕ್ಕದ್ದಲ್ಲ.

## ಅಧ್ಯಾಯ - XII

## ಬಂದಿಗಳ ತಾತ್ಕಾಲಿಕ ಬಿಡುಗಡೆ

**55. ಕೆಲವು ಬಂದಿಗಳನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಅಧಿಕಾರ:-** (1) ರಾಜ್ಯ ಸರ್ಕಾರ ಅಥವಾ ಸರ್ಕಾರವು ಈ ಬಗ್ಗೆ ಅದರ ಅಧಿಕಾರವನ್ನು ಪ್ರತ್ಯಾಯೋಜಿಸಬಹುದಾದಂಥ ಯಾವುದೇ ಪ್ರಾಧಿಕಾರವು, ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು, ಒಂದು ವರ್ಷದಲ್ಲಿ ಹತ್ತು ದಿವಸಗಳನ್ನು ಮೀರದ ಅವಧಿಗಾಗಿ (ಪ್ರಮಾಣಗಳಿಗಾಗಿ ಅಗತ್ಯವಾದ ಕಾಲ ಮತ್ತು ಬಂದೀಖಾನೆಯಿಂದ ಹೊರಡುವ ಮತ್ತು ಅಲ್ಲಿಗೆ ಬರುವ ದಿವಸಗಳನ್ನು ಹೊರತುಪಡಿಸಿ) ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದ ಕಾರಾವಾಸದ ಅವಧಿಗೆ ಗುರಿಯಾಗಿರುವ ಯಾವನೇ ಬಂದಿಯನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಬಹುದು.

(2) (1)ನೇ ಉಪಪ್ರಕರಣದ ಉಪಬಂಧಗಳು ಈ ಅಧಿನಿಯಮದ ಉದ್ದೇಶಗಳಿಗಾಗಿ ರೂಢಿಗತ ಅಪರಾಧಿಯೆಂದು ವರ್ಗೀಕೃತನಾಗಿರುವ ಮತ್ತು ಮೂರಕ್ಕಿಂತ ಹೆಚ್ಚು ಅಪರಾಧ ನಿರ್ಣಯಗಳನ್ನು ಹೊಂದಿರುವ ಬಂದಿಗೆ ಅನ್ವಯವಾಗತಕ್ಕದ್ದಲ್ಲ.

(3) (1)ನೇ ಉಪಪ್ರಕರಣದ ಮೇರೆಗೆ ಯಾವನೇ ವ್ಯಕ್ತಿಯನ್ನು,-

(ಎ) ಅವನು ಅವನ ಬಿಡುಗಡೆಯ ಕಾಲದಲ್ಲಿ ಜೈಲಿನಲ್ಲಿ ಶಿಕ್ಷೆಯನ್ನು ಕಡಿಮೆ ಮಾಡುವುದನ್ನು ಒಳಗೊಂಡು ಅವನ ಶಿಕ್ಷೆಯ ಅರ್ಧದಷ್ಟನ್ನು ಅಥವಾ ಜೈಲಿನಲ್ಲಿ ಶಿಕ್ಷೆಯನ್ನು ಕಡಿಮೆ ಮಾಡುವುದನ್ನು ಒಳಗೊಂಡು ಎರಡು ವರ್ಷಗಳಿಗಿಂತ ಕಡಿಮೆ ಇಲ್ಲದ ಶಿಕ್ಷೆಯ ಅವಧಿ, ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಅನುಭವಿಸಿಲ್ಲದ ಹೊರತು;

(ಬಿ) ಬಂದೀಖಾನೆಯಲ್ಲಿ ಅವನ ವರ್ತನೆಯು ಚೆನ್ನಾಗಿದ್ದ ಹೊರತು;

(ಸಿ) ಈ ಪ್ರಕರಣದ ಮೇರೆಗೆ ಅವನ ಹಿಂದಿನ ಬಿಡುಗಡೆ ಯಾವುದಾದರೂ ಇದ್ದರೆ ಅದರ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಹನ್ನೆರಡು ತಿಂಗಳುಗಳು ಕಳೆದಿದ್ದ ಹೊರತು ಬಿಡುಗಡೆ ಮಾಡತಕ್ಕದ್ದಲ್ಲ.

(4) (1)ನೇ ಉಪ ಪ್ರಕರಣದ ಮೇರೆಗಿನ ಬಂದಿಯ ಬಿಡುಗಡೆಯ ಅವಧಿಯನ್ನು ಅವನ ಶಿಕ್ಷೆಯ ಒಟ್ಟು ಅವಧಿಗೆ ಸಂಬಂಧಿಸಿದಂತೆ ಲೆಕ್ಕಕ್ಕೆ ಹಿಡಿಯತಕ್ಕದ್ದಲ್ಲ.

**56. ಪೆರೋಲ್ ಮೇಲೆ ಬಿಡುಗಡೆ:-** (1) ರಾಜ್ಯ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಈ ಬಗ್ಗೆ ಅದರ ಅಧಿಕಾರವನ್ನು ಪ್ರತ್ಯಾಯೋಜಿಸಬಹುದಾದಂಥ ಯಾವುದೇ ಪ್ರಾಧಿಕಾರವು, ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಅದು ಅವಶ್ಯವೆಂದು ಭಾವಿಸಬಹುದಾದಂಥ ಅವಧಿಗಾಗಿ ಪೆರೋಲಿನ ಮೇಲೆ ಯಾವನೇ ಬಂದಿಯನ್ನು ಯಾವುದೇ ತೀವ್ರ ಕಾಯಿಲೆ ಅಥವಾ ಆ ಬಂದಿಯ ಕುಟುಂಬದ ಯಾವನೇ ಸದಸ್ಯ ಅಥವಾ ಅವನ ತೀರ ಹತ್ತಿರದ ಯಾವನೇ ಸಂಬಂಧಿಯ ಮರಣದ ಸಂದರ್ಭದಲ್ಲಿ ಅಥವಾ ಯಾವುದೇ ಇತರ ಸಾಕಷ್ಟು ಕಾರಣಕ್ಕಾಗಿ ಬಿಡುಗಡೆ ಮಾಡಬಹುದು.

(2) (1)ನೇ ಉಪ ಪ್ರಕರಣದ ಮೇರೆಗಿನ ಬಂದಿಯ ಬಿಡುಗಡೆಯ ಅವಧಿಯನ್ನು ಅವನ ಶಿಕ್ಷೆಯ ಒಟ್ಟು ಅವಧಿಗೆ ಸಂಬಂಧಿಸಿದಂತೆ ಲೆಕ್ಕ ಹಾಕತಕ್ಕದ್ದಲ್ಲ.

**57. ಅವಧಿಯು ಮುಕ್ತಾಯವಾದ ತರುವಾಯ ಬಂದಿಯು ಖುದ್ದಾಗಿ ಹಾಜರಾಗತಕ್ಕದ್ದು ಇಲ್ಲದಿದ್ದರೆ ಅವನು ದಸ್ತಗಿರಿ ಆಗಲು ಗುರಿಯಾಗುತ್ತಾನೆ:-** (1) 55ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಬಂದಿಯನ್ನು ತಾತ್ಕಾಲಿಕವಾಗಿ ಅಥವಾ 56ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಪೆರೋಲಿನ ಮೇಲೆ ಬಿಡುಗಡೆ ಮಾಡಲಾಗಿದ್ದಂಥ ಅವಧಿಯು ಮುಕ್ತಾಯವಾದ ತರುವಾಯ, ಅವನು ಯಾವ ಬಂದೀಖಾನೆಯಿಂದ ಅವನನ್ನು ಬಿಡುಗಡೆ ಮಾಡಲಾಗಿದ್ದಿತೋ ಆ ಬಂದೀಖಾನೆಯ ಪ್ರಭಾರದಲ್ಲಿರುವ ಅಧಿಕಾರಿಯ ಮುಂದೆ ಖುದ್ದಾಗಿ ಹಾಜರಾಗತಕ್ಕದ್ದು.

(2) (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಿದಂತೆ, ಬಂದಿಯು ಖುದ್ದಾಗಿ ಹಾಜರಾಗಲು ತಪ್ಪಿದರೆ, ಅವನನ್ನು ಯಾವನೇ ಪೊಲೀಸು ಅಧಿಕಾರಿಯು ವಾರೆಂಟು ಇಲ್ಲದೆ ದಸ್ತಗಿರಿ ಮಾಡಬಹುದು ಮತ್ತು ಅವನನ್ನು [1][ನ್ಯಾಯಿಕ ಮ್ಯಾಜಿಸ್ಟ್ರೇಟನ ಮುಂದೆ][1] ಹಾಜರುಪಡಿಸಬಹುದು, ಅವನು ಶಿಕ್ಷೆಯ ಮುಕ್ತಾಯವಾಗಿಲ್ಲದ ಭಾಗವನ್ನು ಅನುಭವಿಸಲು ಅವನನ್ನು ಸೆರೆಗೆ ವಾಪಸ್ಸು ಕಳುಹಿಸತಕ್ಕದ್ದು.

**58. ಹಾಜರಾಗಲು ತಪ್ಪಿದ್ದಕ್ಕಾಗಿ ದಂಡನೆ:-** 57ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಿದಂತೆ ಖುದ್ದಾಗಿ ಹಾಜರಾಗಲು ತಪ್ಪುವ ಯಾವನೇ ಬಂದಿಯು ಅಪರಾಧವು ನಿರ್ಣಯವಾದ ಮೇಲೆ ಎರಡು ವರ್ಷಗಳಿಗೆ ವಿಸ್ತರಿಸಬಹುದಾದಂಥ ಅವಧಿಗಾಗಿ ಯಾವುದೇ ವಿವರಣೆಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

1. 1965ರ ಅಧಿನಿಯಮ ಸಂಖ್ಯೆ 13ರ ಮೂಲಕ 1.10.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ - XIII

### ಸಂಕೀರ್ಣ

**59. ಬಂದೀಖಾನೆಯ ಹೊರಗೆ ಬಂದಿಗಳ ಅಭಿರಕ್ಷೆ, ಅವರ ನಿಯಂತ್ರಣ ಮತ್ತು ನಿಯೋಜನೆ:-** ಅವನನ್ನು ಕಾನೂನುಬದ್ಧವಾಗಿ ಬಂಧಿಸಿಟ್ಟಿರಬಹುದಾದಂಥ ಯಾವುದೇ ಬಂದೀಖಾನೆಗೆ ಅಥವಾ ಅಲ್ಲಿಂದ ಕರೆದುಕೊಂಡು ಹೋಗುವಾಗ ಅಥವಾ ಯಾವುದೇ ಅಂಥ ಬಂದೀಖಾನೆಯ ಹೊರಗಡೆ ಅವನು ಕೆಲಸ ಮಾಡುತ್ತಿರುವಾಗಲೆಲ್ಲ ಅಥವಾ ಅದರ ಪರಿಮಿತಿಗಳ ಆಚೆ ಅನ್ಯಥಾ ಇರುವಾಗಲೆಲ್ಲಾ ಅಂಥ ಬಂದೀಖಾನೆಗೆ ಸೇರಿದ ಬಂದೀಖಾನೆ ಅಧಿಕಾರಿಯ ಕಾನೂನುಬದ್ಧ ಅಭಿರಕ್ಷೆಯಲ್ಲಿ ಅಥವಾ ಅದರ ಮೇರೆಗೆ ಅಥವಾ ಅವನ ನಿಯಂತ್ರಣದಲ್ಲಿರುವ ಬಂದಿಯನ್ನು ಬಂದೀಖಾನೆಯಲ್ಲಿರುವುದಾಗಿ ಭಾವಿಸತಕ್ಕದ್ದು ಮತ್ತು ಅವನು ಬಂದೀಖಾನೆಯಲ್ಲಿ ವಾಸ್ತವವಾಗಿ ಇದ್ದಿದ್ದರೆ ಹೇಗೋ ಹಾಗೆ ಎಲ್ಲಾ ಅವೇ ಪರಿಣಾಮಗಳಿಗೆ ಒಳಪಟ್ಟಿರತಕ್ಕದ್ದು.

**60. ಕೈಬೇಡಿ ಹಾಕಿ ಬಂಧನದಲ್ಲಿಡುವುದು:-** ಸೂಪರಿಂಟೆಂಡೆಂಟನು, ಯಾವನೇ ಬಂದಿಯ ಸುರಕ್ಷಿತ ಅಭಿರಕ್ಷೆಗಾಗಿ (ಆ ಬಂದೀಖಾನೆಯ ಸ್ಥಿತಿಗೆ ಅಥವಾ ಬಂದಿಗಳ ಸ್ವಭಾವಕ್ಕೆ ಸಂಬಂಧಿಸಿದಂತೆ) ಅವರನ್ನು ಕೈಬೇಡಿ ಹಾಕಿ ಬಂಧಿಸಿಡುವುದು ಅವಶ್ಯವೆಂದು ಪರ್ಯಾಲೋಚಿಸಿದಾಗಲೆಲ್ಲ ಅವನು ರಾಜ್ಯ ಸರ್ಕಾರದ ಮಂಜೂರಾತಿಯೊಂದಿಗೆ ಇನ್ಸ್‌ಪೆಕ್ಟರ್ ಜನರಲ್ಲನು ವಿಧಿಸಬಹುದಾದಂಥ ವಿನಿಯಮಗಳು ಮತ್ತು ಅನುದೇಶಗಳಿಗೆ ಒಳಪಟ್ಟು ಅವರನ್ನು ಹಾಗೆ ಬಂಧನದಲ್ಲಿಡಬಹುದು.

**61. ಆಜೀವ ಕಾರಾವಾಸದ ಶಿಕ್ಷೆಗೆ ಗುರಿಯಾದ ಬಂದಿಗಳನ್ನು ಕೈಬೇಡಿ ಹಾಕಿ ಬಂಧನದಲ್ಲಿಡುವುದು:-** (1) ಆಜೀವ ಕಾರಾವಾಸದ ಶಿಕ್ಷೆಗೆ ಗುರಿಯಾಗಿರುವ ಬಂದಿಗಳನ್ನು ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ಬಂದೀಖಾನೆಗೆ ಸೇರಿಸಿಕೊಂಡ ತರುವಾಯ ಮೊದಲ ಮೂರು ತಿಂಗಳುಗಳಿಗಾಗಿ ಕೈಬೇಡಿ ಹಾಕಿ ಬಂಧನದಲ್ಲಿಡಬಹುದು.

(2) ಸೂಪರಿಂಟೆಂಡೆಂಟನು, ಬಂದಿಯ ಸುರಕ್ಷಿತ ಅಭಿರಕ್ಷೆಗಾಗಿಯೇ ಆಗಲಿ ಅಥವಾ ಯಾವುದೇ ಇತರ ಕಾರಣಕ್ಕಾಗಿಯೇ ಆಗಲಿ ಯಾವನೇ ಅಂಥ ಬಂದಿಯ ಬಗ್ಗೆ ಕೈಬೇಡಿಗಳನ್ನು ಮೂರು ತಿಂಗಳುಗಳಿಗಿಂತ ಹೆಚ್ಚಿಗೆಯಾಗಿ ಹಾಕುವುದು ಅವಶ್ಯವೆಂದು ಪರ್ಯಾಲೋಚಿಸಿದರೆ ಅವನು ಅವಶ್ಯವಾಗಬಹುದಾದಂಥ ಅವಧಿಗಾಗಿ ಅವುಗಳನ್ನು ಉಳಿಸಿಕೊಳ್ಳುವ ಮಂಜೂರಾತಿಗಾಗಿ ಇನ್ಸ್‌ಪೆಕ್ಟರ್ ಜನರಲ್ಲನಿಗೆ ಅರ್ಜಿ ಹಾಕಿಕೊಳ್ಳತಕ್ಕದ್ದು ಮತ್ತು ಇನ್ಸ್‌ಪೆಕ್ಟರ್ ಜನರಲ್ಲನು ತದನುಸಾರವಾಗಿ ಅಂಥ ಉಳಿಸಿಕೊಳ್ಳುವಿಕೆಯನ್ನು ಮಂಜೂರು ಮಾಡಬಹುದು.

**62. ಅಗತ್ಯವಿರುವ ಹೊರತು ಜೈಲರನು ಬಂದಿಗಳಿಗೆ ಕೈಬೇಡಿಗಳನ್ನು ಹಾಕತಕ್ಕದ್ದಲ್ಲ:-** (1) ಜೈಲರನು ಅವನ ಸ್ವಂತ ಪ್ರಾಧಿಕಾರದ ಮೇಲೆ ಯಾವನೇ ಬಂದಿಗೆ, ಜರೂರು ಅವಶ್ಯಕತೆಯ ಸಂದರ್ಭಗಳಲ್ಲಿ ಹೊರತು ಕೈಬೇಡಿಗಳನ್ನು ಬಂದಿಗೆ ಹಾಕತಕ್ಕದ್ದಲ್ಲ ಅಥವಾ ಅವನನ್ನು ಯಾವುದೇ ಯಾಂತ್ರಿಕ ನಿಗ್ರಹಕ್ಕೆ ಒಳಪಡಿಸತಕ್ಕದ್ದಲ್ಲ.

(2) ಜೈಲರನು ಅವನ ಸ್ವಂತ ಪ್ರಾಧಿಕಾರದ ಮೇಲೆ ಬಂದಿಗೆ ಕೈಬೇಡಿಗಳನ್ನು ಹಾಕಿದಾಗಲೆಲ್ಲ, ಅವನು ಅದರ ಬಗ್ಗೆ ಸೂಪರಿಂಟೆಂಡೆಂಟನಿಗೆ ಕೂಡಲೇ ವರದಿಯನ್ನು ಕಳುಹಿಸತಕ್ಕದ್ದು.

**63. ನಿಯಮ ರಚನಾಧಿಕಾರ:-** (1) ರಾಜ್ಯ ಸರ್ಕಾರವು ಪೂರ್ವ ಪ್ರಕಟಣೆಯ ತರುವಾಯ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳನ್ನು,-

(ಎ) ಬಂದೀಖಾನೆ ಅಪರಾಧಗಳಾಗತಕ್ಕಂಥ ಕಾರ್ಯಗಳನ್ನು ನಿರ್ಧರಿಸುವುದು;

(ಬಿ) ಬಂದೀಖಾನೆ ಅಪರಾಧಗಳನ್ನು ತೀವ್ರ ಮತ್ತು ಗೌಣ ಅಪರಾಧಗಳಾಗಿ ವರ್ಗೀಕರಿಸುವುದನ್ನು ನಿರ್ಧರಿಸುವುದು;

(ಸಿ) ಬಂದೀಖಾನೆ ಅಪರಾಧಗಳು ಅಥವಾ ಅವುಗಳ ವರ್ಗದ ಅಪರಾಧಗಳನ್ನು ಮಾಡುವುದಕ್ಕಾಗಿ ವಿಧಿಸಬಹುದಾದಂಥ ಈ ಅಧಿನಿಯಮದ ಮೇರೆಗೆ ಅಂಗೀಕಾರಾರ್ಹವಾದ ದಂಡನೆಗಳನ್ನು ನಿಗದಿಪಡಿಸುವುದು;

(ಡಿ) ಯಾವ ಸಂದರ್ಭದಲ್ಲಿ ಬಂದೀಖಾನೆ ಅಪರಾಧ ಮತ್ತು ಭಾರತ ದಂಡಸಂಹಿತೆಯ ಮೇರೆಗಿನ ಅಪರಾಧವನ್ನು ಬಂದೀಖಾನೆ ಅಪರಾಧವೆಂದು ವ್ಯವಹರಿಸಬಹುದೋ ಅಥವಾ ವ್ಯವಹರಿಸಬಹುದಾಗಿಲ್ಲವೋ ಆ ಸಂದರ್ಭಗಳನ್ನು ಘೋಷಿಸುವುದು;

(ಇ) ಅಂಕಗಳನ್ನು ಕೊಡುವುದು, ಜೈಲಿನಲ್ಲಿ ಶಿಕ್ಷೆಯನ್ನು ಕಡಿಮೆ ಮಾಡುವುದನ್ನು ಅಥವಾ ಫರ್ಲೋವನ್ನು ಮಂಜೂರು ಮಾಡುವುದು ಯಾವ ಷರತ್ತುಗಳ ಮೇಲೆ ಮತ್ತು ಯಾವ ಪ್ರಾಧಿಕಾರಿಯು ಅಂಥ ಜೈಲಿನಲ್ಲಿನ ಶಿಕ್ಷೆಯನ್ನು ಕಡಿಮೆ ಮಾಡುವುದು ಅಥವಾ ಫರ್ಲೋವನ್ನು ಮಂಜೂರು ಮಾಡಬಹುದೋ ಆ ಷರತ್ತುಗಳನ್ನು ಮತ್ತು ತತ್ಪರಿಣಾಮವಾಗಿ ಆ ಶಿಕ್ಷೆಗಳನ್ನು ಕಡಿಮೆ ಮಾಡುವುದನ್ನು ನಿರ್ಧರಿಸುವುದು;

(ಎಫ್) ಗಲಭೆ ಅಥವಾ ತಪ್ಪಿಸಿಕೊಳ್ಳಲು ಪ್ರಯತ್ನಿಸುವ ಸಂದರ್ಭದಲ್ಲಿ ಯಾವನೇ ಬಂದಿ ಅಥವಾ ಬಂದಿಗಳ ತಂಡದ ವಿರುದ್ಧ ಆಯುಧಗಳ ಪ್ರಯೋಗವನ್ನು ನಿಯಂತ್ರಿಸುವುದು;

(ಜಿ) ಮರಣದ ಸಂಭವವುಳ್ಳ ಬಂದಿಗಳನ್ನು ಯಾವ ಪರಿಸ್ಥಿತಿಗಳಲ್ಲಿ ಬಿಡುಗಡೆ ಮಾಡಬಹುದೋ ಆ ಪರಿಸ್ಥಿತಿಗಳನ್ನು ನಿರ್ಧರಿಸುವುದು ಮತ್ತು ಅಂಥ ಷರತ್ತುಗಳನ್ನು ನಿಯಂತ್ರಿಸುವುದು;

(ಹೆಚ್) ಬಂದೀಖಾನೆಗಳ ವರ್ಗೀಕರಣ ಮತ್ತು ವಾರ್ಡುಗಳು ಮತ್ತು ಇತರ ಬಂಧನದ ಸ್ಥಳಗಳ ವಿವರಣೆ ಮತ್ತು ನಿರ್ಮಾಣ;

(ಐ) ಪ್ರತಿಯೊಂದು ವರ್ಗದ ಬಂದೀಖಾನೆಗಳಲ್ಲಿ ಬಂದಿಸಿಡಬೇಕಾದ ಬಂದಿಗಳನ್ನು ಸಂಖ್ಯೆಗಳು, ಶಿಕ್ಷೆಗಳ ಕಾಲಾವಧಿ ಅಥವಾ ಸ್ವರೂಪ ಇವುಗಳ ಮೂಲಕ ಅಥವಾ ಅನ್ಯಥಾ ನಿಯಂತ್ರಿಸುವುದು;

(ಜೆ) ಬಂದೀಖಾನೆಗಳ ಆಡಳಿತ ಮತ್ತು ಈ ಅಧಿನಿಯಮದ ಮೇರೆಗೆ ನೇಮಕ ಮಾಡಬೇಕಾದ ಎಲ್ಲಾ ಅಧಿಕಾರಿಗಳ ನೇಮಕಾತಿ;

(ಕೆ) ಅವರ ಸ್ವಂತ ಖರ್ಚಿನಲ್ಲಿ ಅಲ್ಲದೆ ಅನ್ಯಥಾ ಪೋಷಿಸಲಾಗುತ್ತಿರುವ ಆಪರಾಧಿಕ ಬಂದಿಗಳ ಮತ್ತು ಸಿವಿಲ್ ಬಂದಿಗಳ ಆಹಾರ, ಹಾಸಿಗೆ ಮತ್ತು ಉಡುಪನ್ನು ಒದಗಿಸುವುದು;

(ಎಲ್) ಬಂದೀಖಾನೆಗಳ ಒಳಗೆ ಅಥವಾ ಹೊರಗಡೆ ನಿರ್ಣೀತ ಅಪರಾಧಿಗಳ ನಿಯೋಜನೆ, ಶಿಕ್ಷಣ ಮತ್ತು ನಿಯಂತ್ರಣ;

(ಎಮ್) ಯಾವ ವಸ್ತುಗಳನ್ನು ಮುಕ್ತ ಅಧಿಕಾರವಿಲ್ಲದೆ ಬಂದೀಖಾನೆಗಳ ಒಳಗೆ ಅಥವಾ ಹೊರಗೆ ತರುವುದನ್ನು ಅಥವಾ ಅಲ್ಲಿಂದ ಸ್ಥಳಾಂತರಿಸುವುದನ್ನು ನಿಷೇಧಿಸಲಾಗಿದೆಯೋ ಆ ವಸ್ತುಗಳನ್ನು ನಿರ್ಧರಿಸುವುದು;

(ಎನ್) ದುಡಿಮೆಯ ರೂಪಗಳನ್ನು ವರ್ಗೀಕರಿಸುವುದು ಮತ್ತು ನಿಯಮಿಸುವುದು ಮತ್ತು ದುಡಿಮೆಯಿಂದ ವಿಶ್ರಾಂತಿ ಪಡೆಯುವ ಅವಧಿಗಳನ್ನು ನಿಯಂತ್ರಿಸುವುದು;

(ಓ) ಬಂದಿಗಳ ನಿಯೋಜನೆಯ ಉತ್ಪತ್ತಿಯ ವಿಲೆಯನ್ನು ನಿಯಂತ್ರಿಸುವುದು;

(ಪಿ) ಆಜೀವ ಕಾರಾವಾಸದ ಶಿಕ್ಷೆಗೆ ಗುರಿಯಾಗಿರುವ ಬಂದಿಗಳನ್ನು ಸಂಕೋಲೆ ಹಾಕಿ ಬಂಧಿಸಿಡುವುದನ್ನು ನಿಯಂತ್ರಿಸುವುದು;

(ಕ್ಯೂ) ಬಂದಿಗಳ ವರ್ಗೀಕರಣ ಮತ್ತು ಪ್ರತ್ಯೇಕೀಕರಣ;

(ಆರ್) 27ನೇ ಪ್ರಕರಣದ ಮೇರೆಗೆ ನಿರ್ಣೀತ ಅಪರಾಧಿಗಳಾದ ಆಪರಾಧಿಕ ಬಂದಿಗಳ ಬಂಧನವನ್ನು ನಿಯಂತ್ರಿಸುವುದು;

(ಎಸ್) ಇತಿವೃತ್ತಗಳನ್ನು ಸಿದ್ಧಪಡಿಸುವುದು ಮತ್ತು ಅವುಗಳನ್ನು ಇಟ್ಟುಕೊಂಡು ಬರುವುದು;

(ಟಿ) ಬಂದಿಗಳನ್ನು ಬಂದೀಖಾನೆಗಳ ಅಧಿಕಾರಿಗಳೆಂದು ಆಯ್ಕೆ ಮಾಡುವುದು ಮತ್ತು ಅವರ ನೇಮಕಾತಿಗಳು;

(ಯು) ಒಳ್ಳೆಯ ನಡತೆಗಾಗಿ ಬಹುಮಾನಗಳು;

(ವಿ) ಯಾವುದಕ್ಕೆ ಬಂದಿಯನ್ನು ವರ್ಗಾಯಿಸಬೇಕಾಗಿದೆಯೋ ಆ ಯಾವುದೇ ಇತರ ರಾಜ್ಯ ಸರ್ಕಾರದ ಸಮ್ಮತಿಗೆ ಒಳಪಟ್ಟು ಯಾವ ಬಂದಿಗಳ ಕಾರಾವಾಸದ ಅವಧಿಯು ಮುಕ್ತಾಯವಾಗುವುದರಲ್ಲಿದೆಯೋ ಆ ಬಂದಿಗಳ ವರ್ಗಾವಣೆಯನ್ನು ನಿಯಂತ್ರಿಸುವುದು;

(ಡಬ್ಲ್ಯೂ) ಬಂದಿಗಳ ಚಿಕಿತ್ಸೆ ಮತ್ತು ಬಂದೀಖಾನೆಗಳಲ್ಲಿ ಬಂಧನದಲ್ಲಿಟ್ಟಿರುವ ಆಪರಾಧಿಕ ಮನೋವಿಕಲರು ಅಥವಾ ಗುಣಹೊಂದಿದ ಆಪರಾಧಿಕ ಮನೋವಿಕಲರ ವಿಲೆ;

(ಎಕ್ಸ್) ಬಂದಿಗಳು ಮಾಡಿಕೊಂಡ ಅಪೀಲುಗಳು ಮತ್ತು ಅರ್ಜಿಗಳ ರವಾನೆಯನ್ನು ಮತ್ತು ಅವರ ಸ್ನೇಹಿತರು ಮತ್ತು ಸಂಬಂಧಿಕರೊಡನೆ ಅವರ ಸಂಪರ್ಕವನ್ನು ನಿಯಂತ್ರಿಸುವುದು;

(ವೈ) ಬಂದೀಖಾನೆಗಳ ಸಂದರ್ಶಕರ ನೇಮಕಾತಿ ಮತ್ತು ಅವರ ಮಾರ್ಗದರ್ಶನ;

(ಝಡ್) ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಯಾವುದೇ ಅಥವಾ ಎಲ್ಲಾ ಉಪಬಂಧಗಳನ್ನು ಸಹಾಯಕ ಜೈಲುಗಳು ಅಥವಾ ದಂಡ ಪ್ರಕ್ರಿಯಾ ಸಂಹಿತೆ, 1898ನೆಯ 541ನೇ ಪ್ರಕರಣದ ಮೇರೆಗೆ ಗೊತ್ತುಪಡಿಸಿದ ವಿಶೇಷ ಬಂಧನ ಸ್ಥಳಗಳಿಗೆ ಮತ್ತು ನಿಯೋಜಿತರಾದ ಅಧಿಕಾರಿಗಳಿಗೆ ಮತ್ತು ಅದರಲ್ಲಿ ಬಂಧಿಸಿಟ್ಟಿರುವ ಬಂದಿಗಳಿಗೆ ವಿಸ್ತರಿಸುವುದು;

(ಎಎ) ಬಂದಿಗಳ ಪ್ರವೇಶ, ಅಭಿರಕ್ಷೆ, ನಿಯೋಜನೆ, ಆಹಾರ, ಚಿಕಿತ್ಸೆ ಮತ್ತು ಬಿಡುಗಡೆ; ಮತ್ತು

(ಬಿಬಿ) ಸಾಮಾನ್ಯವಾಗಿ ಈ ಅಧಿನಿಯಮದ ಮೇರೆಗೆ ನಿಯಮಿಸಿರುವ ಯಾವುದೇ ವಿಷಯ

- ಇವುಗಳಿಗಾಗಿ ರಚಿಸಬಹುದು.

**64. ನಿಯಮಗಳು ಮತ್ತು ಅಧಿಸೂಚನೆಗಳನ್ನು ರಾಜ್ಯದ ವಿಧಾನ ಮಂಡಲದ ಮುಂದೆ ಇಡತಕ್ಕದ್ದು:-** ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು ಮತ್ತು 68ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಅದನ್ನು ರಚಿಸಿದ ಅಥವಾ ಹೊರಡಿಸಿದ ತರುವಾಯ ಆದಷ್ಟು ಬೇಗ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನ ಅಥವಾ ಒಂದಾದಮೇಲೊಂದರಂತೆ ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಮೂವತ್ತು ದಿವಸಗಳ ಒಟ್ಟು ಅವಧಿಗಾಗಿ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಟ್ಟ ಅಧಿವೇಶನ ಅಥವಾ ಅದರ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ಆ ನಿಯಮ ಅಥವಾ ಆ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮ ಅಥವಾ ಆ ಅಧಿಸೂಚನೆಯನ್ನು ರಚಿಸತಕ್ಕದ್ದಲ್ಲವೆಂದು ಅಥವಾ ಹೊರಡಿಸತಕ್ಕದ್ದಲ್ಲವೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ, ಆ ನಿಯಮ ಅಥವಾ ಆ ಅಧಿಸೂಚನೆಯು ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಸಂದರ್ಭಾನುಸಾರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗಿರತಕ್ಕದ್ದಲ್ಲ; ಆದಾಗ್ಯೂ, ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮ ಅಥವಾ ಅಧಿಸೂಚನೆಯ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**65. ನಿಯಮಗಳ ಪ್ರತಿಗಳ ಪ್ರದರ್ಶನ:-** 63ನೇ ಪ್ರಕರಣದ ಮೇರೆಗೆ ರಚಿಸಿದ ನಿಯಮಗಳ ಪ್ರತಿಗಳನ್ನು, ಅವುಗಳು ಬಂದೀಖಾನೆಗಳ ಆಡಳಿತಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ, ಇಂಗ್ಲೀಷು ಮತ್ತು ಪ್ರಾದೇಶಿಕ ಭಾಷೆ ಇವೆರಡರಲ್ಲಿ ಬಂದೀಖಾನೆಯೊಳಗೆ ನಿಯೋಜಿತರಾದ ಎಲ್ಲಾ ವ್ಯಕ್ತಿಗಳು ಪ್ರವೇಶಾವಕಾಶವನ್ನು ಹೊಂದಿರತಕ್ಕಂಥ ಯಾವುದೇ ಎದ್ದು ಕಾಣುವ ಸ್ಥಳದಲ್ಲಿ ಪ್ರದರ್ಶಿಸತಕ್ಕದ್ದು.

**66. ಸೂಪರಿಂಟೆಂಡೆಂಟ್ ಮತ್ತು ವೈದ್ಯಕೀಯ ಅಧಿಕಾರಿಗಳ ಅಧಿಕಾರಗಳ ಚಲಾವಣೆ:-** ಈ ಅಧಿನಿಯಮದ ಮೂಲಕ ಸೂಪರಿಂಟೆಂಡೆಂಟನಿಗೆ ಅಥವಾ ವೈದ್ಯಕೀಯ ಅಧಿಕಾರಿಗೆ ಪ್ರದಾನ ಮಾಡಿರುವ ಅಥವಾ ವಿಧಿಸಿರುವ ಎಲ್ಲಾ ಅಥವಾ ಯಾವುದೇ ಅಧಿಕಾರ ಮತ್ತು ಕರ್ತವ್ಯವನ್ನು ಅವನ ಗೈರು ಹಾಜರಿಯಲ್ಲಿ ರಾಜ್ಯ ಸರ್ಕಾರವು ಈ ಬಗ್ಗೆ ನೇಮಕ ಮಾಡಬಹುದಾದಂಥ ಇತರ ಅಧಿಕಾರಿಯ ಹೆಸರಿನಿಂದಾಗಲಿ ಅಥವಾ ಹೆಸರು ಸೂಚಿಸುವ ಮೂಲಕ ಅವನ ಸರ್ಕಾರಿ ಪದನಾಮದ ಮೂಲಕವೇ ಆಗಲಿ ಚಲಾಯಿಸಬಹುದು ಮತ್ತು ನೆರವೇರಿಸಬಹುದು.

**67. ನಿರಸನ ಮತ್ತು ಉಳಿಸುವಿಕೆಗಳು:-** ಈ ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಅಧಿನಿಯಮಿತಿಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 ([1][ಕರ್ನಾಟಕ][1] ಅಧಿನಿಯಮ 1899ರ III) ಇದರ 6ನೇ ಪ್ರಕರಣವು ಅಂಥ ನಿರಸನಕ್ಕೆ ಸಂಬಂಧಿಸಿದಂತೆ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8ನೇ ಪ್ರಕರಣ ಮತ್ತು 24ನೇ ಪ್ರಕರಣವು, ಸದರಿ ಅಧಿನಿಯಮಿತಿಗಳು ಸದರಿ ಅಧಿನಿಯಮದ ಅರ್ಥ ವ್ಯಾಪ್ತಿಯೊಳಗಿನ ಅಧಿನಿಯಮಿತಿಗಳಾಗಿದ್ದಿದ್ದರೆ ಮತ್ತು ಈ ಅಧಿನಿಯಮದ ಮೂಲಕ ಅವುಗಳನ್ನು ನಿರಸನಗೊಳಿಸಿದಿದ್ದರೆ ಮತ್ತು ಪುನರ್ ಅಧಿನಿಯಮಿತಿಗೊಳಿಸಿದ್ದಿದ್ದರೆ ಹೇಗೋ ಹಾಗೆಯೇ ಅನ್ವಯವಾಗತಕ್ಕದ್ದು.

**68. ತೊಂದರೆಗಳ ನಿವಾರಣೆ:-** (1) ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿರುವ ಅಧಿನಿಯಮಗಳ ಸಂವಾದಿ ಉಪಬಂಧಗಳಿಂದ ಸದರಿ ಉಪಬಂಧಗಳಿಗೆ ಪರಿವರ್ತನೆಗೊಳ್ಳುವ ಕಾರಣದಿಂದ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು, ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಆ ತೊಂದರೆಯನ್ನು ನಿವಾರಿಸುವುದಕ್ಕಾಗಿ ಅದಕ್ಕೆ ಅವಶ್ಯ ಅಥವಾ ವಿಹಿತವೆಂದು ಕಂಡುಬರುವಂಥ ಉಪಬಂಧಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ (ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಜಾರಿಯಲ್ಲಿರುವ ಸಂವಾದಿ ಅಧಿನಿಯಮಗಳ ಉಪಬಂಧಗಳಿಂದ ಪರಿವರ್ತನೆಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಅಲ್ಲದೆ ಅನ್ಯಥಾ) ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಈ ತೊಂದರೆಯನ್ನು ನಿವಾರಿಸುವುದಕ್ಕಾಗಿ ಅದಕ್ಕೆ ಅವಶ್ಯ ಅಥವಾ ವಿಹಿತವೆಂದು ಕಂಡುಬರುವಂಥ ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿಲ್ಲದಂಥ ಉಪಬಂಧಗಳನ್ನು ರಚಿಸಬಹುದು.

**ಅನುಸೂಚಿ**

**(67ನೇ ಪ್ರಕರಣವನ್ನು ನೋಡಿ)**

1. ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವಂತೆ ಮೈಸೂರು ಬಂದೀಖಾನೆಗಳ ಅಧಿನಿಯಮ, 1943 (1943ರ ಮೈಸೂರು ಅಧಿನಿಯಮ XLIV);

2. [1][ಗುಲ್ಬರ್ಗಾ ಪ್ರದೇಶದಲ್ಲಿ][1] ಜಾರಿಯಲ್ಲಿರುವಂತೆ ಹೈದರಾಬಾದು ಬಂದೀಖಾನೆಗಳ ಅಧಿನಿಯಮ, 1954 (1954ರ ಹೈದರಾಬಾದು ಅಧಿನಿಯಮ XXIX);

3. ಅನುಕ್ರಮವಾಗಿ [1][ಬೆಳಗಾಂವ್ ಪ್ರದೇಶ][1], [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ಮತ್ತು ಕೂರ್ಗ್ ಜಿಲ್ಲೆಯಲ್ಲಿ ಜಾರಿಯಲ್ಲಿರುವಂತೆ ಬಂದೀಖಾನೆಗಳ ಅಧಿನಿಯಮ, 1894 (ಕೇಂದ್ರ ಅಧಿನಿಯಮ 1894ರ ಸಂಖ್ಯೆ IX).

* * * * *

**ಅಧಿಸೂಚನೆಗಳು**

**I**

**ಬೆಂಗಳೂರು, ದಿನಾಂಕ 25ನೇ ಜುಲೈ, 1974 [ಸಂಖ್ಯೆ ಹೆಚ್‌ಡಿ 124 ಪಿಆರ್‌ಎಂ 68]**

ಜಿ.ಎಸ್.ಆರ್. 212:- ಕರ್ನಾಟಕ ಬಂದೀಖಾನೆಗಳ ಅಧಿನಿಯಮ 1963 (1963ರ ಕರ್ನಾಟಕ ಅಧಿನಿಯಮ 33) ರ 1ನೇ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1974ನೇ ಜುಲೈ 25ನೇದನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕ ಎಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ಎಲ್. ಶಾಸ್ತ್ರಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಗೃಹ ಇಲಾಖೆ.

*(ಕರ್ನಾಟಕ ರಾಜಪತ್ರ, ಭಾಗ IV-2ಸಿ(i), ದಿನಾಂಕ 25ನೇ ಜುಲೈ, 1974ರ ಪುಟ 757ರಲ್ಲಿ ಪ್ರಕಟಿಸಲಾಗಿದೆ)*

**II**

**ಬೆಂಗಳೂರು, ದಿನಾಂಕ 16ನೇ ಸೆಪ್ಟೆಂಬರ್, 1965 [ಸಂಖ್ಯೆ ಹೆಚ್‌ಡಿ 15 ಪಿಸಿಆರ್ 65]**

ಎಸ್.ಓ. 3164:- ದಂಡ ಪ್ರಕ್ರಿಯಾ ಸಂಹಿತೆ (ಮೈಸೂರು ತಿದ್ದುಪಡಿ) ಅಧಿನಿಯಮ, 1965 (1965ರ ಮೈಸೂರು ಅಧಿನಿಯಮ 13) ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1965ರ ಅಕ್ಟೋಬರ್ ಮೊದಲನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕ ಎಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀನಿವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ
ಗೃಹ ಇಲಾಖೆ.

*(ಕರ್ನಾಟಕ ರಾಜಪತ್ರ, ಭಾಗ IV-2ಸಿ(ii), ದಿನಾಂಕ 23ನೇ ಸೆಪ್ಟೆಂಬರ್, 1965 ರಲ್ಲಿ ಪ್ರಕಟಿಸಲಾಗಿದೆ)*

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

The above translation of the Karnataka Prisons Act, 1963 (33 of 1963) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963)

Bangalore

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1252

**ಮ.ರಾ. ಹೆಗಡೆ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

**HOME AND TRANSPORT SECRETARIAT**

**NOTIFICATION**

**No. HD 222 PCR 2003, Bangalore, Dated: 31st October 2003**

In pursuance of the Provisions contained in Section 6 of the Delhi Special Police Establishment Act, 1946 (Act XXV of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the member of the Delhi Special Police Establishment for registration of the case and investigation of offences punishable under Section 120-B read with 420,467,468,471 IPC and 13(2) read with 13(1) (d) of Prevention of Corruption Act, 1988 against Shri P.K.R. Nambiar, the then Chief Manager, Shri K.R. Ramakrishnan, the then Senior Manager, Shri T. Baby, the then Manager of Canara Bank, Overseas Branch, Ernakulam and the following private persons namely Shri K.R. Sudarshan, Managing Director, Mrs. Rejitha Sudarshan, Director and Shri T. Sudhakar, Director of Mrs. Comet Commodity Exports Ltd., Aluva, Kerala, and Mrs. Comet Comodity Exports Ltd., Erumathala, Aluva, Kerala, for their fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

P.R. 1231

**P. KRISHNA MURTHY**

Under Secretary to Government,

Home & Transport Department, (Crimes).

**NOTIFICATION**

**No. HD 237 PCR 2003, Bangalore, Dated: 31st October 2003**

In pursuance of the Provisions contained in Section 6 of the Delhi Special Police Establishment Act, 1946 (Act XXV of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 7 and Under Section 13(2) read with 13(1) (d) of Prevention of Corruption Act, 1988 against Sri S.C. Kulkarani, DE, BSNL, Muddebihal Division, Bijapur Telecom District for his fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

P.R. 1232

**P. KRISHNA MURTHY**

Under Secretary to Government,

Home & Transport Department, (Crimes).

**NOTIFICATION**

**No. HD 238 PCR 2003, Bangalore, Dated: 14th November 2003**

In pursuance of the Provisions contained in Section 6 of the Delhi Special Police Establishment Act, 1946 (Act XXV of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 120-B read with 420 IPC and Under Section 13(2) read with 13(1) (d) of Prevention of Corruption Act, 1988 against Sri K. Umesh, Loan-Clerk, Syndicate Bank, Vasanth nagar Branch, Bangalore, Sri G.P. Prabhu, No. 63/2, Second Temple Street, 15th Cross, Melleshwaram,

Bangalore. Smt Sunitha Krishna, No. 22/43, LIG, 7th B-Main, Yelahanka New Town, Bangalore, Sri A. Srinivas S/o Sri Gopalkrishna Prabhu, No. 2/2, 4th Temple Road, 12th Cross, Melleshwaram, Bangalore, Sri R.V. Revanna No.7/1 Vivekananda Nagara, Kathrikuppam Main Road, Bangalore and Sri G.N.S. Sharma No.1343, 9th cross, Ashok Nagar, Bangalore and other unknown officials of Syndicate Bank and Vijaya Bank for their fraudulent acts any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

P.R. 1233

**P. KRISHNA MURTHY**

Under Secretary to Government,

Home & Transport Department, (Crimes).

**NOTIFICATION**

**No. HD 243 PCR 2003, Bangalore, Dated: 14th November 2003**

In pursuance of the Provisions contained in Section 6 of the Delhi Special Police Establishment Act, 1946 (Act XXV of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 7 and Under Section 13(2) read with 13(1) (d) of Prevention of Corruption Act, 1988 against Sri K. Nageshwara Rao, Asst. Garrison Engineer, MES, Ulsoor, Bangalore, for his fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

P.R. 1234

**P. KRISHNA MURTHY**

Under Secretary to Government,

Home & Transport Department, (Crimes).

**NOTIFICATION**

**No. HD 257 PCR 2003, Bangalore, Dated: 24th November 2003**

In pursuance of the Provisions contained in Section 6 of the Delhi Special Police Establishment Act, 1946 (Act XXV of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 13(2) read with 13(1) (e) of Prevention of Corruption Act, 1988 against Sri K. Nageshwara Rao, Asst. Garrison Engineer, MES, Ulsoor, Bangalore, for his fraudulent acts and any other public servants or persons in relation to or in connection with the said offences committed and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

P.R. 1235

**P. KRISHNA MURTHY**

Under Secretary to Government,

Home & Transport Department, (Crimes).

**DEPARTMENT OF PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 20 SDE 2003, Bangalore, Dated: 29th November 2003**

In exercise of the powers conferred by sub-rule (1) of rule 10 of the Karnataka Civil Services (Classification, Control and Appeal) Rules, 1957, the Government of Karnataka hereby empowers the Commissioner of Excise, Bangalore to place under suspension Group-A Officers of the Department of Excise holding posts carrying scale of pay upto and inclusive of the scale of pay of Rs.10620-14960.

By Order and in the name of the Governor of Karnataka,

P.R. 1239

**H.R. NAGENDRA**

Under Secretary to Government-2,

Department of Personnel and Administrative Reforms, (Service Rules)